ಪ್ರಚಾರ ಪುಸ್ತಕಮಾಲೆ 83

# ಶ್ರೀನಾಥ

ಕೆ. ವೆಂಕಟರಾಮಪ್ಪ



ಪ್ರಚಾರ ಪುಸ್ತಕಮಾಲೆ— ೮೩

# ಶ್ರೀನಾಥ


ಕೆ. ವೆಂಕಟರಾಮಪ್ಪ, ಎಂ.ಎ.






೧೯೮೧

ಮೊದಲನೆ ಮುದ್ರಣ : ೧೯೫೬
ಎರಡನೆ ಮುದ್ರಣ : ೧೯೭೦
೫,೦೦೦ ಪ್ರತಿಗಳು
ಮೂರನೆ ಮುದ್ರಣ : ೧೯೮೧
೧೦,೦೦೦ ಪ್ರತಿಗಳು



ಬೆಲೆ : ೨೫ ಪೈಸೆ

ಪ್ರಕಾಶಕರು
ನಿರ್ದೇಶಕರು, ಪ್ರಸಾರಾಂಗ, ಮೈಸೂರು—೫೭೦ ೦೧೨

ಮುದ್ರಕರು
ನಿರ್ದೇಶಕರು, ವಿಶ್ವವಿದ್ಯಾನಿಲಯ ಮುದ್ರಣಾಲಯ, ಮೈಸೂರು

# ಮುನ್ನುಡಿ

ಈ ಪ್ರಚಾರ ಪುಸ್ತಕಮಾಲೆ ಪ್ರಾರಂಭವಾಗಿ ಇಂದಿಗೆ ಸುಮಾರು ಇಪ್ಪತ್ತೈದು ವರ್ಷಗಳಾಗಿವೆ. ಈ ಅವಧಿಯಲ್ಲಿ 83 ಪುಸ್ತಿಕೆಗಳು ಈ ಮಾಲೆಯಲ್ಲಿ ಪ್ರಕಟವಾಗಿವೆ. ಕಾಲಾವಧಿಯನ್ನು ಗಮನಿಸಿದರೆ ಈಗ ಹೊರಬಿದ್ದಿರುವ ಕಿರುಹೊತ್ತಿಗೆಗಳ ಸಂಖ್ಯೆ ಈಗಿರುವುದಕ್ಕಿಂತಲೂ ದ್ವಿಗುಣವೋ ತ್ರಿಗುಣವೋ ಆಗಿರಬೇಕಾಗಿತ್ತೆಂದು ಹೇಳಬಹುದು. ಆದರೂ ಅವುಗಳ ಗುಣವನ್ನೂ ಅವು ಮಾರಾಟವಾಗುತ್ತಿರುವ ವೇಗವನ್ನೂ ಗಮನಿಸಿದರೆ ಈ ಮಾಲೆಯ ಉಪಯುಕ್ತತೆ ಮತ್ತು ಜನಪ್ರಿಯತೆ ವ್ಯಕ್ತವಾಗುತ್ತದೆ. ಸಾಮಾನ್ಯವಾಗಿ ಪ್ರತಿಯೊಂದು ಪುಸ್ತಿಕೆಯೂ ಮೂರು ನಾಲ್ಕು ಸಾರಿ ಮುದ್ರಿತವಾಗಿದೆ. ದಿನೇ ದಿನೇ ಈ ಮಾಲೆಯ ಬಗೆಗೆ ಜನರ ವಿಶ್ವಾಸಾದರಗಳು ಅಧಿಕವಾಗುತ್ತಿವೆ. "ಈ ತಿಂಗಳು ಏನಾದರೂ ಹೊಸ ಪುಸ್ತಿಕೆ ಬಂದಿದೆಯೆ? ಮುಗಿದು ಹೋಗಿರುವ ಪುಸ್ತಿಕೆಗಳು ಅಚ್ಚಾಗಿವೆಯೆ?" ಎಂದು ಮೇಲಿಂದ ಮೇಲೆ ಜನ ಕೇಳುತ್ತಿರುತ್ತಾರೆ. ಇದು ನಿಜವಾಗಿಯೂ ಸಂತೋಷದ ಸಂಗತಿ ; ನಾಡಿನ ಪ್ರಗತಿಯ ಒಂದು ಚಿಹ್ನೆ.

ನಾಡಿನಲ್ಲಿ ದಿನೇ ದಿನೇ ವಿದ್ಯಾವಂತರ ಮತ್ತು ಅಕ್ಷರಸ್ಥರ ಸಂಖ್ಯೆ ಬೆಳೆಯುತ್ತಿದೆ. ಕೇವಲ ಸಾಕ್ಷರತೆಯಿಂದ ಮಹತ್ತಾದ ಪ್ರಯೋಜನವೇನೂ ಲಭಿಸದು. ಸಾಕ್ಷರತೆ ಬೇರೊಂದು ಸಿದ್ಧಿಗಾಗಿ ಸಾಧನವೇ ಹೊರತು ಅದೇ ಪರಮ ಗುರಿಯಲ್ಲ, ಜ್ಞಾನ ಸಂಪಾದನೆಯೇ ಅದರ ಪರಮ ಗುರಿ. ಈ ಗುರಿಯ ಸಾಧನೆಗಾಗಿ ಸಕಲ ಅನುಕೂಲತೆಗಳನ್ನು ಕಲ್ಪಿಸುವುದು ವಿಶ್ವವಿದ್ಯಾನಿಲಯದಂಥ ಸಂಸ್ಥೆಗಳ ಆದ್ಯ ಕರ್ತವ್ಯ. ಈ ಮೂಲಕ ವಿಶ್ವವಿದ್ಯಾ

ನಿಲಯದ ಜ್ಞಾನವಾಹಿನಿ ನಾಡಿನ ಮೂಲೆ ಮೂಲೆಗೆ ಹರಿದು, ಸಮಷ್ಟಿಪ್ರಜ್ಞೆ ವಿಕಾಸಗೊಳ್ಳಲನುಕೂಲವಾಗುತ್ತದೆ.

ಈ ಮಾಲೆಯಿಂದ ಸಾಮಾನ್ಯ ಜನರಲ್ಲಿ ಜ್ಞಾನಪ್ರಸಾರಕಾರ್ಯ ತಕ್ಕಮಟ್ಟಿಗೆ ಯಶಸ್ವಿಯಾಗಿ ನಡೆದಿರುವಂತೆಯೇ ಕನ್ನಡದಲ್ಲಿ ವಿಜ್ಞಾನಸಂಬಂಧವಾದ ವಿಷಯಗಳನ್ನು ಸುಲಭವಾಗಿ ಸರಳವಾಗಿ ಹೇಳಬಹುದು, ಮತ್ತು ಕನ್ನಡ ವೈಜ್ಞಾನಿಕ ಭಾಷೆಯಾಗಬಲ್ಲುದು ಎಂಬ ಅಂಶ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಈ ಪುಸ್ತಿಕೆಗಳ ಪಟ್ಟಿಯನ್ನೊಮ್ಮೆ ಓದಿದರೆ ಸಂದೇಹವಾದಿಗಳ ಶಂಕೆ ನಿವಾರಣೆಗೊಂಡು ಧೈರ್ಯ ಮೂಡದಿರದು. ಇವುಗಳಲ್ಲಿ 55 ಪುಸ್ತಿಕೆಗಳು ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿವಿಜ್ಞಾನ, ಸಮಾಜವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಇತಿಹಾಸ ಮೊದಲಾದವುಗಳಿಗೆ ಸಂಬಂಧಿಸಿದವು. ಉಳಿದ 24 ಪುಸ್ತಿಕೆಗಳು ಸಾಹಿತ್ಯ ಮತ್ತು ಸಾಹಿತ್ಯ ವಿಮರ್ಶೆಗೆ ಸಂಬಂಧಿಸಿದವು. ಇವುಗಳ ಗ್ರಂಥಕರ್ತರು ಪ್ರಮುಖವಾಗಿ ವಿಶ್ವವಿದ್ಯಾನಿಲಯದಲ್ಲಿ ಹತ್ತಿಪ್ಪತ್ತು ವರ್ಷಗಳಕಾಲ ಪಾಠ ಹೇಳಿ ನುರಿತಿರುವ ಘನ ವಿದ್ವಾಂಸರು. ಬಹಳ ಹಿಂದೆಯೇ ವೈಜ್ಞಾನಿಕ ಗ್ರಂಥಗಳ ರಚನೆಗೆ ಕೈಹಾಕಿ ಕನ್ನಡ ವೈಜ್ಞಾನಿಕ ಭಾಷೆಯಾಗುವ ಸಾಮರ್ಥ್ಯವನ್ನು ಪಡೆದಿದೆ, ವಿಶ್ವವಿದ್ಯಾನಿಲಯದಲ್ಲಿ ಶಿಕ್ಷಣ ಮಾಧ್ಯಮವಾಗುವ ಶಕ್ತಿಯನ್ನು ಪಡೆದಿದೆ ಎಂದು ತೋರಿಸಿ ಕೊಟ್ಟಿದ್ದಾರೆ. ಅವರೆಲ್ಲ ಅಭಿನಂದನಾರ್ಹರು.

ಈ ಮಾಲೆಯ ಕಾರ್ಯ ತ್ವರಿತಗೊಂಡು, ವಿಸ್ತಾರಗೊಂಡು ಪುಸ್ತಕಗಳ ಸಂಖ್ಯೆ ದಿನೇ ದಿನೇ ಬೆಳೆಯಬೇಕೆಂದೂ ಇದರಿಂದ ಸಾಮಾನ್ಯ ಜನತೆ ಸಂಪೂರ್ಣ ಪ್ರಯೋಜನ ಪಡೆದು ಸಮಷ್ಟಿ ಪ್ರಜ್ಞೆ ಸರ್ವತೋಮುಖವಾಗಿ ವಿಕಾಸಗೊಳ್ಳಬೇಕೆಂದೂ ವಿಶ್ವ

ವಿದ್ಯಾನಿಲಯದ ಆಸೆ. ಕನ್ನಡನಾಡು ಒಂದುಗೂಡಿರುವ ಈ ಶುಭಮುಹೂರ್ತದಲ್ಲಿ ಕನ್ನಡನುಡಿ ಆಡಳಿತಭಾಷೆಯಾಗಿ, ವ್ಯವಹಾರದ ಭಾಷೆಯಾಗಿ, ಶಿಕ್ಷಣದ ಭಾಷೆಯಾಗಿ, ಜನತೆಯ ಸಂಸ್ಕೃತಿ ವಿಕಾಸಸಾಧನದ ಭಾಷೆಯಾಗಿ ಮುಂದುವರಿಯುವುದರಲ್ಲಿ ಸಂದೇಹವಿಲ್ಲ. ವಿಶ್ವವಿದ್ಯಾನಿಲಯದ ಈ ಸೇವೆಯನ್ನು ಕರ್ನಾಟಕ ಸಂಪೂರ್ಣವಾಗಿ ತನ್ನ ಮೇಲ್ಮೆಗೂ ಏಳ್ಗೆಗೂ ಬಳಸಿಕೊಳ್ಳುತ್ತದೆಂದು ನಾವು ಹಾರೈಸುತ್ತೇವೆ.

ಮೈಸೂರು
5–1–1959

**ಕೆ. ವಿ. ಪುಟ್ಟಪ್ಪ**
ವೈಸ್–ಛಾನ್ಸಲರ್

# ಅರಿಕೆ

ತೆಲುಗು ಕವಿ ಶ್ರೀನಾಥನನ್ನು ಕುರಿತು ಹಲವು ವರ್ಷಗಳ ಹಿಂದೆ ಆನೆಕಲ್ಲು, ದೇವನಹಳ್ಳಿ ಮುಂತಾದ ಸ್ಥಳಗಳಲ್ಲಿ ನಡೆದ ಪ್ರಚಾರೋಪನ್ಯಾಸ ಸಪ್ತಾಹಗಳಲ್ಲಿ ನಾನು ಮಾಡಿದ ಕೆಲವು ಭಾಷಣಗಳನ್ನು ಕೊಂಚ ಸಂಸ್ಕರಿಸಿ ಇಲ್ಲಿ ಪ್ರಕಟಿಸುತ್ತಿದ್ದೇನೆ. ಈ ಚಿಕ್ಕ ಪುಸ್ತಕದಲ್ಲಿ ಶ್ರೀನಾಥನ ಎಲ್ಲ ಕೃತಿಗಳ ವಿಸ್ತಾರವಾದ ಪರಿಚಯು ಸಾಧ್ಯವಿಲ್ಲ. ಅವುಗಳಲ್ಲಿ ಮುಖ್ಯವಾವೂ ಸ್ವಾರಸ್ಯವೂ ಆದ ಕೆಲವು ಅಂಶಗಳನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಿದ್ದೇನೆ. ಇದನ್ನು ಪ್ರೀತಿಯಿಂದ ಪ್ರಕಟಿಸುತ್ತಿರುವ ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರಿಗಳಿಗೆ ಕೃತಜ್ಞತಾಪೂರ್ಣವಾದ ನನ್ನ ವಂದನೆಗಳು.

ಮೈಸೂರು **ಕೆ. ವೆಂಕಟರಾಮಪ್ಪ**
14–2–1959

# ವಿಷಯಾನುಕ್ರಮಣಿಕೆ

# ಪೀಠಿಕೆ

ಶ್ರೀನಾಥನು ತನ್ನ ಸಮಕಾಲೀನರಾದ ತೆಲುಗು ಕವಿಗಳನ್ನೆಲ್ಲ ಮೀರಿಸಿದ ಮಹಾಕವಿ; ತೆಲುಗಿನಲ್ಲಿ ಭಾರತವನ್ನು ರಚಿಸಿ "ಕವಿತ್ರಯ"ರೆಂದು ಪ್ರಸಿದ್ಧರಾಗಿರುವ ನನ್ನಯ ಭಟ್ಟ, ತಿಕ್ಕನಸೋಮಯಾಜಿ, ಎರ್ರಪ್ರೆಗಡರಿಗೆ ಸಮಜೋಡಿ. ಇವನ ಕಾಲ ಕ್ರಿ.ಶ. 1385–1440. ತೆಲುಗು ಸಂಸ್ಕೃತಗಳೆರಡರಲ್ಲಿಯೂ ಈತನಿಗೆ ಅಸಾಧಾರಣವಾದ ಪಾಂಡಿತ್ಯ. ಆದ್ದರಿಂದಲೇ ಈತನು ವಿದ್ವದೌಷಧವೆನಿಸಿದ ನೈಷಧವನ್ನೂ ಉಕ್ಕಿನಉಂಡೆಗೆ ಹೋಲಿಸಲ್ಪಟ್ಟಿರುವ ಕಾಶೀಖಂಡವನ್ನೂ ಸುಲಭವಾಗಿ ತೆಲುಗಿಸಿ ಕವಿಸಾರ್ವಭೌಮನೆನಿಸಿಕೊಂಡನು. ಈತನು ಕೃಷ್ಣಾ ಜಿಲ್ಲೆಯ ಕಾಲ್ಪಟ್ಟಣವೆಂಬ ಒಂದು ಸಣ್ಣ ಗ್ರಾಮದಲ್ಲಿ ಜನಿಸಿ ತನ್ನ ತಾತನಾದ ಕಮಲನಾಭಾಮಾತ್ಯನ ಪೋಷಣೆಯಲ್ಲಿ ಬೆಳೆದು ಆತನ ಮಾರ್ಗದರ್ಶಿತ್ವದಲ್ಲಿಯೇ ಉಭಯಂ ಭಾಷಾ ಸಾಹಿತ್ಯಗಳನ್ನೂ ಚೆನ್ನಾಗಿ ಅಭ್ಯಾಸಮಾಡಿ ಪಾಂಡಿತ್ಯವನ್ನೂ ಗಳಿಸಿದನು. ಈತನು ಹುಟ್ಟುಕವಿ. ಬಾಲ್ಯದಲ್ಲಿಯೇ ಈತನಿಗೆ ಕವಿತಾಶಕ್ತಿ ಲಭಿಸಿದಂತೆ ತೋರುತ್ತದೆ:

ಚಿನ್ನಾರಿ ಪೊನ್ನಾರಿ ಚಿಱುತ ಕೂಕಟಿ ನಾಡು
ರಚಿಯಿಂಚಿತಿ ಮರುತ್ತರಾಟ್ಚರಿತ್ರ
ನೂನೂಗು ಮೀಸಾಲ ನೂತ್ನ ಯೌವನಮುನ
ಶಾಲಿವಾಹನಸಪ್ತಶತಿನೊಡಿವಿತಿ
ಸಂತರಿಂಚಿತಿ ನಿಂಡುಜವ್ವನಂಬುನಯಂದು
ಹರ್ಷನೈಷಧಕಾವ್ಯಮಾಂಧ್ರಭಾಷ
ಪ್ರೌಢನಿರ್ಭರವಯಃ ಪರಿಪಾಕಮುನ ಗೊನಿ
ಯಾಡಿತಿ ಭೀಮನಾಯಕುನಿ ಮಹಿಮ
ಪ್ರಾಯಮಿಂತಕು ಗೈವ್ರಾಲಕುಂಡ
ಕಾಶಿಕಾಖಂಡಮನು ಮಹಾಪ್ರಬಂಧಮುನು ತೆಲುಗುಸೇಸೆದ

ಎಂದು "ಕಾಶೀಖಂಡ" ದಲ್ಲಿ ಶ್ರೀನಾಥನೇ ಹೇಳಿಕೊಂಡಿದ್ದಾನೆ. (ಇನ್ನೂ ಎಳೆಯುವನಾಗಿ ಮುದ್ದುಮಾತನಾಡುವ ಕಾಲದಲ್ಲಿಯೇ ನಾನು "ಮರುತ್ತರಾಯ" ಚರಿತ್ರೆಯನ್ನು ವಿರಚಿಸಿದೆ. ಮೀಸೆ ಮೂಡುವ ವಯಸ್ಸಿನಲ್ಲಿ, ಅಂದರೆ, ಯೌವನ ಪ್ರಾದುರ್ಭಾವ ಸಮಯದಲ್ಲಿ "ಶಾಲಿವಾಹನ ಸಪ್ತಶತಿ" ಯನ್ನು ಬರೆದೆ. ತುಂಬು ಯೌವನವಲ್ಲಿದ್ದಾಗ ಶ್ರೀ ಹರ್ಷನ ನೈಷಧವನ್ನು ತೆಲುಗಿಸಿದೆ. ಪ್ರೌಢವಯಸ್ಸಿನಲ್ಲಿ ಭೀಮನಾಯಕನ ಮಹಿಮೆಯನ್ನು ಕೊಂಡಾಡಿದೆ. ಇನ್ನೂ ಇಳಿವಯಸ್ಸಿಗೆ ಮೊದಲೇ ಕಾಶೀಖಂಡ ವನ್ನು ತೆಲುಗು ಮಾಡುತ್ತೇನೆ.)

"ಕಾಶೀಖಂಡ"ವನ್ನು ಬರೆಯುವ ವೇಳೆಗಾಗಲೇ ಶ್ರೀನಾಥನು ಮಧ್ಯವಯಸ್ಸಿನವನಾಗಿದ್ದನೆಂದು ಇದರಿಂದ ತಿಳಿಯುತ್ತದೆ. ಅಲ್ಲದೆ ಅದಕ್ಕಿಂತ ಮುಂಚೆಯೇ ಅವನು "ಮರುತ್ತರಾಯ ಚರಿತ್ರೆ" "ಶಾಲೀವಾಹನ ಸಪ್ತಶತೀ" "ಆಂಧ್ರನೈಷಧ" "ಭೀಮಖಂಡ" ಎಂಬ ಕಾವ್ಯಗಳನ್ನು ಬರೆದು ಮುಗಿಸಿದ್ದನೆಂದು ಸ್ಪಷ್ಟವಾಗಿದೆ. ಇವಲ್ಲದೆ ಶ್ರೀನಾಥನು "ಹರವಿಲಾಸಮು" "ನಿಗಮಾರ್ಥಸಾರ ಸಂಗ್ರಹಮು" "ಪಲ್ನಾಟಿ ವೀರಚರಿತೆ" "ವೀಧಿನಾಟಕಂ" ಎಂಬ ಇತರ ಹಲವು ಕೃತಿಗಳನ್ನೂ ರಚಿಸಿದ್ದಾನೆ. ಇಷ್ಟೇ ಅಲ್ಲದೆ, ಶ್ರೀ ನಾಥನು ತನ್ನ ಅನುಭವಗಳನ್ನು ಹಲವು ಬಿಡಿ ಪದ್ಯಗಳಲ್ಲಿ ಹೇಳಿ ಕೊಂಡಿದ್ದಾನೆ. ಈ ಆಶು ಕವಿತೆಗಳು ತೆಲುಗು ದೇಶದಲ್ಲಿ ಬಹಳ ಜನಪ್ರಿಯವಾಗಿ ಚಾಟುಶ್ಲೋಕಗಳಂತೆ ಪ್ರಚಾರಗೊಂಡಿವೆ. ಅವು ಗಳಿಂದ ಶ್ರೀನಾಥ ಕವಿಯ ಜೀವನದ ಹಲವು ಸಂಗತಿಗಳು ತಿಳಿದು ಬರುತ್ತವೆ.

## ಜೀವನ ಕಥೆ

ಶ್ರೀನಾಥನು ಕ್ರಿ.ಶ. 1402 ರಿಂದ 1423ರ ವರೆಗೆ ರಾಜ್ಯವಾಳಿದ ಕೊಂಡವೀಡಿನ ಪೆದಕೋಮಟಿ ವೇಮಾರೆಡ್ಡಿಯ ಆಸ್ಥಾನದಲ್ಲಿ ಮೊದಲು ವಿದ್ಯಾಧಿಕಾರಿಯಾಗಿದ್ದನು. ಆತನ ಆಸ್ಥಾನಕ್ಕೆ ಬಂದ ಪಂಡಿತರನ್ನೂ ಕವಿಗಳನ್ನೂ ಪರೀಕ್ಷಿಸಿ ಅವರವರ ಯೋಗ್ಯತೆಗೆ ತಕ್ಕ ಪುರಸ್ಕಾರವನ್ನು ನಿರ್ಣಯಿಸುವುದು ಶ್ರೀನಾಥನ ಕೆಲಸವಾಗಿತ್ತು. ಆ ಪ್ರಭುವಿನ ಅನೇಕ ದಾನ ಶಾಸನಗಳಲ್ಲಿ ಶ್ರೀನಾಥನ ಹೆಸರೂ ಇದೆ. ಹಲವಾರು ಪಂಡಿತರಿಗೆ ಶ್ರೀನಾಥನು ಅಗ್ರಹಾರಗಳನ್ನೂ ಕೊಡಿಸಿದನಂತೆ. ಈ ಕಾಲದಲ್ಲಿ ಶ್ರೀನಾಥನು ಪ್ರಭುವಿನ ಪ್ರೀತಿ ಗೌರವಗಳಿಗೆ ಪಾತ್ರನಾಗಿ ಬಹಳ ವೈಭವದ ಜೀವನವನ್ನೇ ನಡೆಸಿದನು. ಶ್ರೀನಾಥನು ಮಹಾರಸಿಕನಾದ ಭೋಗಲಾಲಸನು. ಈತನಿಗೆ ಅವಚಿ ತಿಪ್ಪಯ್ಯಸೆಟ್ಟಿಯೆಂಬ ಮಹಾ ಶ್ರೀಮಂತ ವರ್ತಕನು ಬಾಲ್ಯ ಸ್ನೇಹಿತ. ಈತನಿಂದ ಬೇಕಾದ ಹಾಗೆ ಕಸ್ತೂರಿ ಮುಂತಾದ ಪರಿಮಳ ದ್ರವ್ಯಗಳೂ ಅಲಂಕಾರ ಸಾಮಗ್ರಿಗಳೂ ದೊರೆಯುತ್ತಿದ್ದುವು. ಅಲ್ಲದೆ ಸಾಂಪರಾಯನ ತೆಲುಂಗಾಧೀಶನೆಂಬ ಅರಸನೂ ಶ್ರೀನಾಥನನ್ನು ಪೋಷಿಸಿದ ದೊರೆ. ಅವನು ಈ ಕವಿಗೆ ಬೇಕು ಬೇಕಾದಾಗ ಬೇಕಾದಷ್ಟು ಕಸ್ತೂರಿಯನ್ನು ಕೊಡುತ್ತಿದ್ದನಂತೆ. ಒಂದು ಸಲ ಶ್ರೀನಾಥನು ಆತನನ್ನು ಕಂಡು ಕಸ್ತೂರಿಯನ್ನು ಕೇಳಿದ ವೈಖರಿಯನ್ನು ಗಮನಿಸಿ :

ಅಕ್ಷಯ್ಯಂಬಗು ಸಾಂಪರಾಯನಿ ತೆಲುಂಗಾಧೀಶ
ಕಸೂರಿಕಾಭಿಕ್ಷಾದಾನಮುಸೇಯರಾ ಸುಕವಿರಾಟ್
ಬೃಂದಾರಕ ಸ್ವಾಮಿಕಿನ್ ದಕ್ಷಾರಾಮಚಳುಕ್ಯ ಭೀಮವರ
ಗಂಧರ್ವಾಪ್ಸರೋಭಾಮಿನೀ ವಕ್ಷೋಜದ್ವಯಕುಂಭಿಕುಂಭ
ಮುಲಪೈವಾಸಿಂಚು ದದ್ವಾಸನಲ್

(ಸಾಂಪರಾಯುನ ತೆಲುಂಗಾಧೀಶ, ಕವಿರಾಟ್ ಬೃಂದಾರಕ ಸ್ವಾಮಿಗೆ ಕಸ್ತೂರಿಯನ್ನು ಅಕ್ಷಯವಾಗಿ ದಾನಮಾಡು. ಹಾಗೆ ದಾನಮಾಡಿದ ಕಸ್ತೂರಿಯು ದಾಕ್ಷಾರಾಮ ಭೀಮವರಗಳಲ್ಲಿನ ಗಂಧರ್ವಾಪ್ಸರೋ ಭಾಮಿನಿಯರ ವಕ್ಷೋಜಗಳ ಮೇಲೆ ಶೋಭಿಸುತ್ತದೆ!) ಕಸ್ತೂರಿಕಾಭಿಕ್ಷೆ, ಆ ಭಿಕ್ಷೆಯ ಉದ್ದೇಶ, ಆ ದಾನ ಸಾರ್ಥಕ್ಯದ ರೀತಿ—ಎಲ್ಲವೂ ಶ್ರೀನಾಥನ ರಸಿಕತೆಗೆ ನಿದರ್ಶನ ಗಳಾಗಿವೆ!

ಇಂಥಾ ರಸಿಕಶಿಖಾಮಣಿಯು ಒಂದುಸಲ ರೆಡ್ಡಿ ರಾಜರ ನಿಯೋಗಿಯಾಗಿ ಪಲ್ನಾಡಿಗೆ ಹೋಗಬೇಕಾಯಿತು. ಗುಂಟೂರು ಜಿಲ್ಲೆಯ ಪಶ್ಚಿಮ ಭಾಗಕ್ಕೆ ಪಲ್ನಾಡೊಂದು ಹೆಸರು. ಶ್ರೀನಾಥನ ಕಾಲಕ್ಕೆ ಈ ಪ್ರಾಂತ್ಯದಲ್ಲಿ ವಿಶೇಷ ಜಲಕ್ಷಾಮ. ಜನ ಬಹಳ ಒರಟರು, ಬಡವರು. ಭೋಗಲಾಲಸನಾದ ಶ್ರೀನಾಥನಿಗೆ ಇಲ್ಲಿ ಯಾವ ವಿಧವಾದ ಉಪಚಾರವೂ ನಡೆಯಲಿಲ್ಲ. ಅವನು ಬಹಳ ಬೇಸರಗೊಂಡು ಪಲ್ನಾಡನ್ನು ಬಗೆಬಗೆಯಾಗಿ ಅವಹೇಳನ ಮಾಡಿದ್ದಾನೆ :

> ರಸಿಕಡು ಪೋವಡು ಪಲ್ನಾ
> ಡೆಸಗಂಗಾ ರಂಭಯೈನನೇಕುಲೆ ವಡುಕುನ್
> ವಸುಧೇಶುಡೈನ ದುನ್ನುನು
> ಗುಸುಮಾಸ್ತ್ರುಂಡೈನ ಜೊನ್ನಕೂಡೇ ಕುಡುಚುನ್

(ರಸಿಕನು ಪಲ್ನಾಡಿಗೆ ಹೋಗನು. ಏಕೆಂದರೆ ಅಲ್ಲಿ ರಂಭೆಯಾದರೂ ರಾಟೆ ಹಿಡಿದು ನೂಲಲೇ ಬೇಕು. ವಸುಧೇಶನೇ ಆದರೂ ನೇಗಿಲು ಹಿಡಿದು ಉಳಬೇಕು. ಆ ಸಾಕ್ಷಾತ್ ಕುಸುಮಬಾಣನೇ ಆದರೂ ಜೋಳದ ಕೂಳನ್ನೇ ತಿನ್ನಬೇಕು!)

ಪಲ್ನಾಡಿನಲ್ಲಿ ಜೋಳ ಮುಖ್ಯವಾದ ಆಹಾರ ಧಾನ್ಯ.

ಶ್ರೀನಾಥನಿಗೆ ಇದು ಅಪ್ರಿಯುವಾಯಿತು. ಅವನು ಈ ಜೋಳದ ಬಳಕೆಯುನ್ನು ಕುರಿತು ಇನ್ನೊಂದು ಪದ್ಯದಲ್ಲಿ ಬಹಳ ನೊಂದು ನುಡಿದಿದ್ದಾನೆ :

ಜೊನ್ನಕಲಿ ಜೊನ್ನಯಂಬಲಿ
ಜೊನ್ನನ್ನಮು ಜೊನ್ನ ಪಿಸರು ಜೊನ್ನಲೆ ತಪ್ಪನ್
ಸನ್ನನ್ನಮು ಸುನ್ನಸುಮೀ
ಪನ್ನುಗ ಪಲ್ನಾಟಿಸೀಮ ಪ್ರಜಲಂದಱಿಕುನ್

[ಪಲ್ನಾಡಿನ ಪ್ರಜೆಗಳೆಲ್ಲರಿಗೂ ಜೋಳದ ಮುದ್ದೆ, ಜೋಳದ ಗಂಜಿ, ಜೋಳದ ಅನ್ನ, ಜೋಳದ ಉಪ್ಪಿಟ್ಟು, ಜೋಳ, ಜೋಳ, ಜೋಳವೇ ಹೊರತು ಸಣ್ಣಕ್ಕಿಯು ಅನ್ನ ಸೊನ್ನೆ!]

ಇನ್ನೊಂದು ಸಲ ಪಲ್ನಾಡಿನಲ್ಲಿ ಸಂಚಾರ ಮಾಡುತ್ತಿದ್ದಾಗ ಶ್ರೀನಾಥನು ಊಟತಿಂಡಿಗಳಿಗೇ ಅಲ್ಲದೆ ನೀರಿಗೂ ಕಷ್ಟಪಡ ಬೇಕಾಗಿ ಬರಲು ಬಹಳ ಜುಗುಪ್ಸೆ ಪಟ್ಟು ಒಂದು ಪದ, ಹೇಳಿದ್ದಾನೆ :

ಅಂಗಡಿಯೂರಲೇದು ವರಿಯನ್ನಮು ಲೇದು ಶುಚಿತ್ವಮೇಮಿ
ಲೇದಂಗನ ಲಿಂಪು ಲೇರು ಪ್ರಿಯಮೈನ ವನೆಂಬುಲು ಲೇವು
ನೀಟಿಕೈಭಂಗಪಡಂಗ ಬಾಲ್ಪಡು ಕೃಪಾಪರುಲೆವ್ವರು ಲೇರು
ದಾತಲೆನ್ನಂಗನು ಸುನ್ನ ಗಾನ ಪಲಿನಾಟಿಕಿ ಕಾಟಿಕಿ ಬೋವ
ನೇಟಿಕಿನ್?

(ಊರಲ್ಲಿ ಅಂಗಡಿಯಿಲ್ಲ, ನೆಲ್ಲಕ್ಕಿಯನ್ನವಿಲ್ಲ, ಶುಚಿತ್ವವೆಂಬು ದೇನೇನೂ ಇಲ್ಲ. ಅಂಗನೆಯರು ಇಂಪಿಲ್ಲ, ಪ್ರಿಯುವಾದ ನಂದನ ಗಳಿಲ್ಲ. ನೀರಿಗಾಗಿ ಕಷ್ಟಪಡುತ್ತಿದ್ದರೆ ನೆರವಾಗುವ ಕೃಪಾಶಾಲಿ ಗಳು ಯಾರೂ ಇಲ್ಲ. ಹುಡುಕಿದರೂ ಈ ರಾಜ್ಯದಲ್ಲಿ ದಾತರು

ಸೊನ್ನೆ. ಈ ಪಲ್ನಾಡಿಗೆ, ಕಾಡಿಗೆ* (ಶ್ಮಶಾನಕ್ಕೆ) ಏಕೆ ಹೋಗ ಬೇಕು?)

ಇನ್ನೊಂದು ಸಲ ಪಲ್ನಾಡಿನಲ್ಲಿ ಪ್ರಯಾಣ ಮಾಡುತ್ತಿದ್ದಾಗ ವಿಶೇಷ ದಾಹವಾಗಿ ಎಲ್ಲಿಯೂ ಕುಡಿಯಲು ನೀರು ಸಿಕ್ಕದೆ ಕಷ್ಟಪಟ್ಟು ಶ್ರೀನಾಥನು ನೀರಿಗಾಗಿ ಆ 'ಗಂಗಾಧರ'ನನ್ನು ಬೇಡಿದ ರೀತಿ ಇದು :

ಸಿರಿಗಲವಾನಿಕಿ ಚೆಲ್ಲುನು
ದರುಣುಲು ಪದಿಯಾರುವೇಲ ದಗ ಪೆಂಡ್ಲಾಡನ್
ದಿರಿಪೆಮುನಕಿದ್ದರಾಂಡ್ರಾ
ಪರಮೇಶಾ ಗಂಗ ವಿಡುಮು ಪಾರ್ವತಿ ಚಾಲುನ್

(ಸಿರಿಯುಳ್ಳ ಲಕ್ಷ್ಮೀಪತಿಯು ಹದಿನಾರು ಸಾವಿರ ಚೆಲ್ಲರೆ ತರುಣಿಯರನ್ನು ಮದುವೆಯಾದರೂ ಸಲ್ಲುತ್ತದೆ. 'ತಿರುಪೆ'ಯವನಿಗೆ (ಆದಿಭಿಕ್ಷು) ಇಬ್ಬರು ಹೆಂಡಿರೇಕೆ? ಪರಮೇಶಾ, ನಿನಗೆ ಪಾರ್ವತಿಯೊಬ್ಬಳು ಸಾಕು ; ಗಂಗೆಯನ್ನು ಬಿಟ್ಟುಬಿಡು) ಮಹಾಶಿವಭಕ್ತನಾದ ಶ್ರೀನಾಥನು ಕಾಶೀಖಂಡ, ಶಿವರಾತ್ರೀ ಮಹಾತ್ಮ್ಯ, ಹರವಿಲಾಸ ಎಂಬ ಶೈವಗ್ರಂಥಗಳನ್ನು ರಚಿಸಿದ್ದಾನೆ. ಅಂಥವನು ಈ ಪದ್ಯದಲ್ಲಿ ಶಿವನನ್ನು ಪ್ರಾರ್ಥಿಸಿರುವ ರೀತಿಯಲ್ಲಿ ಒಂದು ಔದ್ಧತ್ಯವಿದೆ. ಅವನ ಹಾಸ್ಯಮತಿಯನ್ನು ಇಲ್ಲಿ ಗ್ರಹಿಸಬೇಕಾಗಿದೆ.

ಹೀಗೆ ಹಲವು ಸಂದರ್ಭಗಳಲ್ಲಿ ಪಲ್ನಾಡನ್ನು ಹೀಯಾಳಿಸಿದ್ದರೂ ಕೊನೆಗಾಲದಲ್ಲಿ ಎಲ್ಲ ರಾಜಾಶ್ರಯವೂ ತಪ್ಪಿ ಪಲ್ನಾಡನ್ನು ಸೇರಿ ಪ್ರಜೆಗಳ ಮನರಂಜನೆಗಾಗಿ ಶ್ರೀನಾಥನು 'ಪಲ್ನಾಟಿ ವೀರಚರಿತ' 'ಕಾಟಮರಾಜುಕಥ' ಮುಂತಾದ ಜನಪದ ಕಾವ್ಯಗಳನ್ನು ಬರೆಯು

---

* ತೆಲುಗಿನಲ್ಲಿ 'ಕಾಡು' ಎಂಬ ಮಾತಿಗೆ ವಾಡಿಕೆಯಾಗಿ ಸ್ಮಶಾನ ಎಂಬರ್ಥವೂ ಇದೆ.

ಬೇಕಾಯಿತು! ಕೊಂಡವೀಡು, ರಾಜಮಹೇಂದ್ರಗಳ ರೆಡ್ಡಿ ರಾಜರು ಪದಭ್ರಷ್ಟರಾಗಲು ಆ ರಾಜ್ಯಗಳು ವಿಜಯನಗರ ರಾಜ್ಯ ದಲ್ಲಿ ಲೀನವಾದವು. ಆಗ ಶ್ರೀನಾಥನು ನಿರಾಶ್ರಿತನಾಗಿ ದೇಶಾಟನೆ ಮಾಡುತ್ತ ಕಾಂಚೀಪುರಕ್ಕೆ ಹೋಗಿ ಅಲ್ಲಿ ತನ್ನ ಬಾಲ್ಯಸ್ನೇಹಿತನಾದ ಸಾಹುಕಾರ ಅವಚಿ ತಿಪ್ಪಯ್ಯಶೆಟ್ಟಿಯ ಆಶ್ರಯದಲ್ಲಿ ಕೊಂಚಕಾಲ ವಿದ್ದು ಆತನಿಗಾಗಿ 'ಹರಿವಿಲಾಸ' ವೆಂಬ ಒಂದು ಸುಂದರ ಶೈವ ಪ್ರಬಂಧವನ್ನು ಬರೆದನು. ಆದರೆ ಶ್ರೀನಾಥನು ಎಲ್ಲಿಯೂ ತೃಪ್ತನಾಗಿ ನಿಲ್ಲುವ ಸ್ವಭಾವದವನಲ್ಲ. ಅವನು ಮತ್ತೆ ರಾಜ ಮಹೇಂದ್ರಕ್ಕೆ ಹೋಗಿ ಅಲ್ಲಿ ಬೆಂಡಪೂಡಿ ಅನ್ನಯ್ಯ ಮಂತ್ರಿಯ ಆಶ್ರಯಪಡೆದು ಆತನಿಗಾಗಿ 'ಭೀಮೇಶ್ವರ ಪುರಾಣ 'ವನ್ನು ಬರೆದು ಅಂಕಿತಮಾಡಿದನು. "ಬ್ರಾಹ್ಮೀದತ್ತ ವರಪ್ರಸಾದ" ನಾದ ಶ್ರೀನಾಥನು ಈ ವೇಳೆಗೆ ತನ್ನ ಪಾಂಡಿತ್ಯ ಪ್ರತಿಭೆಗಳಿಂದ ತೆಲುಗು ದೇಶದಲ್ಲೆಲ್ಲ ಕೀರ್ತಿಶಾಲಿಯಾಗಿದ್ದನು. ಅವನನ್ನು ಆ ಕಾಲದ ಪಂಡಿತರು "ಅಖಿಲ ಪುರಾಣ ವಿದ್ಯಾ ಪ್ರವೀಣ"ನೆಂದೇ ಭಾವಿಸಿ ಗೌರವಿಸಿದರು.

ಕೊಂಡವೀಡಿನ ರಾಜನ ಆಸ್ಥಾನದಲ್ಲಿ ಕವಿವರ್ಯನಾಗಿದ್ದ ಶ್ರೀನಾಥನು "ಆಂಧ್ರನೈಷಧವನ್ನು" ಮಾಮಿಡಿಸಿಂಗನಿಗೂ "ಪಂಡಿತಾರಾಧ್ಯಚರಿತೆ"ಯೇ ಮೊದಲಾದ ಹಲವು ಕೃತಿಗಳನ್ನು ಪ್ರೆಗಡಯ್ಯನಿಗೂ ಅಂಕಿತ ಮಾಡಿಕೊಟ್ಟನು.

ಒಂದುಸಲ ಕೊಂಡ ವೀಡಿನಿಂದ ವಿಜಯನಗರಕ್ಕೆ ಹೋದಾಗ ಶ್ರೀನಾಥನಿಗೆ ಬೇಗನೆ ಪ್ರಭುದರ್ಶನ ಲಭಿಸಲಿಲ್ಲ. ಅಲ್ಲಿ ಹಲವು ದಿವಸ ಕಾಯಬೇಕಾಯಿತು. ವಿಜಯನಗರದಲ್ಲಿ ಶ್ರೀನಾಥನು ಯಾವುದೋ ಅಡುಗೂ ಲಜ್ಜಿಯ ಮನೆಯಲ್ಲಿ ಬೀಡುಬಿಟ್ಟು ಬಹಳ ಕ್ಲೇಶಪಟ್ಟನಂತೆ. ತನ್ನ ಸಂಕಟವನ್ನು ಒಂದು ಪದ್ಯದಲ್ಲಿ ಅವನು ಹೀಗೆ ಹೇಳಿಕೊಂಡಿದ್ದಾನೆ:

ಕುಳ್ಳಾಯುಂಚಿತಿ ಗೋಕಸುಟ್ಟಿತಿ ಮಹಾಕೂರ್ಪಾಸಮುನ್ದೊಡಿಗಿತಿನ್
ವೆಲ್ಲುಲ್ಲಿನ್ ತಿಲಪಿಷ್ಟಮುನ್ ಪಿಸಿಕಿತಿನ್ ವಿಶ್ವಸ್ತ ವಡ್ಡಿಂಪಗಾ
ಸಲ್ಲಾಯಂಬಲಿ ದ್ರಾವಿತಿನ್ ರುಚುಲು ದೋಸಂಬಂಚು ಬೋನಾಡಿತಿನ್
ದಲ್ಲೀ ಕನ್ನಡರಾಜ್ಯಲಕ್ಷ್ಮೀ ದಯಲೇದಾ ನೇನು ಶ್ರೀನಾಥುಡನ್

[ಕುಲಾಯಿಯನ್ನು ಇಟ್ಟುಕೊಂಡೆ. ಸೀರೆ (ರುಮಾಲು) ಯನ್ನು ತಲೆಗೆ ಸುತ್ತಿದೆ. ಈ ದೊಡ್ಡ ಕುಪ್ಪಸ (ನಿಲುವಂಗಿ)ವನ್ನು ತೊಟ್ಟು ಕೊಂಡೆ. ಬೆಳ್ಳುಳ್ಳಿ ಎಳ್ಳುಗಳ ಚಟ್ನಿಯನ್ನು ಕೈಯಲ್ಲಿ ಹಿಸುಕಿ ತಿನ್ನಲಾರದೆ ಎಸೆದುಬಿಟ್ಟೆ. ತಣ್ಣನೆಯ ಗಂಜಿಯನ್ನು ಕುಡಿದೆ. ರುಚಿಗಳು ದೋಷವೆಂದು ಬಿಟ್ಟುಬಿಟ್ಟೆ. ತಾಯಿ, ಕನ್ನಡ ರಾಜ್ಯ ಲಕ್ಷ್ಮೀ, ಇಷ್ಟಾದರೂ ನಿನಗೆ ದಯೆ ಬರಲಿಲ್ಲವೆ? ನಾನು ಶ್ರೀನಾಥ!]

ಹೀಗೆ ದೀನನಾಗಿ ಮೊರೆಯಿಟ್ಟುಕೊಂಡ ಮೇಲೆ ತಾಯಿ ಒಲಿಯದಿರುವುದು ಸಾಧ್ಯವೇ? ಶ್ರೀನಾಥನಿಗೆ ಕನ್ನಡ ರಾಜನ ಸಂದರ್ಶನ ಲಭಿಸಿತು. ಅಲ್ಲಿ ಮಹಾಪಂಡಿತನೆಂದು ಹೆಸರು ಗಳಿಸಿದ್ದ ಡಿಂಡಿಮಭಟ್ಟನನ್ನು ವಾದದಲ್ಲಿ ಸೋಲಿಸಿ ಶ್ರೀನಾಥನು ಅವನ ಬಿರುದಿನ ಕಂಚುಢಕ್ಕೆಯನ್ನು ಒಡೆಸಿಹಾಕಿ "ಕವಿಸಾರ್ವಭೌಮ"ನೆಂಬ ಬಿರುದನ್ನು ಪಡೆದನು. ರಾಜನು ಶ್ರೀನಾಥನಿಗೆ ಬಹಳ ಸಂತೋಷದಿಂದ ಕನಕಾಭಿಷೇಕವನ್ನೇ ಮಾಡಿಸಿದನಂತೆ! ಕನ್ನಡ ರಾಯರು ಕಾವ್ಯಪಕ್ಷಪಾತಿಗಳಲ್ಲವೆ? ಶ್ರೀನಾಥನ ಜೀವನ ದಲ್ಲಿಯೇ ಅಂದು ಮಹಾ ಶುಭದಿನ. ವಿಜಯನಗರದ ಆಸ್ಥಾನ ಮಂದಿರದ ಮುತ್ತಿನಶಾಲೆಯಲ್ಲಿ ಕನಕಪೀಠದ ಮೇಲೆ ಕುಳಿತು ಕನಕಾಭಿಷೇಕ ಮಾಡಿಸಿಕೊಂಡ ಸುದಿನ. ಇನ್ನು ತನಗಿಂತ ಹಿರಿಯ ಪಂಡಿತರಿಲ್ಲವೆಂಬ ಹೆಮ್ಮೆಯ ಹೆಸರು ಹೊಂದಿದ ದಿನ!

ಕೆಲವು ಕಾಲದ ಮೇಲೆ ಶ್ರೀನಾಥನು ನೆಲ್ಲೂರಿನ ಪ್ರಾಂತ್ಯದ

ರಾವುಸಿಂಗ ಭೂಪಾಲನ ಆಸ್ಥಾನಕ್ಕೆ ಹೋಗಬೇಕಾಯಿತು. ಆ ರಾಜನಿಗೆ ಸರ್ವಜ್ಞನೆಂಬ ಬಿರುದಿತ್ತು. ಆತನು ಸ್ವಯಂ ಪಂಡಿತ. ಶ್ರೀನಾಥನೂ ಅಲ್ಲಿಗೆ ಹೋಗುವಾಗ ತನಗೆ ಮನ್ನಣೆ ದೊರಕೀತೋ ಇಲ್ಲವೋ ಎಂದು ಅಂಜುತ್ತಲೇ ಹೋದನಂತೆ! ಆ ರಾಜನ ಸಭಾಮಂದಿರದಲ್ಲಿ ಶಾರದಾದೇವಿಯ ವಿಗ್ರಹವನ್ನು ಕಂಡು ಶ್ರೀನಾಥನು ಹೀಗೆ ಪ್ರಾರ್ಥಿಸಿದನಂತೆ.

ದೀನಾರ ಟಂಕಾಲ ದೀರ್ಥ ಮಾಡಿಂಚಿತಿ
ದಕ್ಷಿಣಾಧೀಶು ಮುತ್ಯಾಲಶಾಲ
ಪಗುಲಗೊಟ್ಟಿಂಚಿತುದ್ಭಟ ವಿವಾದಪ್ರೌಢಿ
ಗೌಡಡಿಂಡಿಮಭಟ್ಟು ಕಂಚುಢಕ್ಕ
ಚಂದ್ರಭೂಪಕ್ರಿಯಾಶಕ್ತಿರಾಯಲಯೊದ್ದ
ಬಾದುಕೊಲ್ಪಿತಿ ಸಾರ್ವಭೌಮ ಬಿರುದು
ಪಲಕುದೋಡ್ಯೆತಾಂಧ್ರಭಾಷಾ ಮಹಾಕಾವ್ಯ
ನೈಷಧ ಗ್ರಂಥಸಂದರ್ಭಮುನಕು
ಎಟುಲ ಮೆಪ್ಪಿಂಚೆದೋ ನನ್ನುನಿಂಕಮೀದ
ರಾವುಸಿಂಗ ಮಹೀಪಾಲು ಧೀವಿಶಾಲು
ನಿಂಡುಕೊಲುವುನ ನೆಲಕೊನಿಯುಂಡಿ ನೀವು
ಸರಸ ಸದ್ಗುಣನಿಕುರುಂಬ ಶಾರದಾಂಬ

(ದಕ್ಷಿಣಾಧೀಶನ ಮುತ್ತಿನ ಓಲಗಶಾಲೆಯಲ್ಲಿ ನನಗೆ ದೀನಾರಟಂಕಗಳಿಂದ ಅಭಿಷೇಕಮಾಡಿಸಿದೆ. ಆಂಧ್ರಭಾಷೆಯಲ್ಲಿ ನೈಷಧವೆಂಬ ಮಹಾಕಾವ್ಯವನ್ನು ಬರೆಯಲು ಸಹಾಯ ಮಾಡಿದೆ. ಗೌಡ ದೇಶದ ಡಿಂಡಿಮಭಟ್ಟನನ್ನು ಪ್ರೌಢವಾದ ವಾಗ್ವಾದದಲ್ಲಿ ಸೋಲಿಸಿ ಅವನ ಕಂಚಿನ ಢಕ್ಕೆಯನ್ನು ಒಡೆದು ಹಾಕಿಸಲು ಸಹಾಯ ಮಾಡಿದೆ. ಚಂದ್ರಭೂಪ ಕ್ರಿಯಾಶಕ್ತಿರಾಯರ ಆಸ್ಥಾನದಲ್ಲಿ ನನಗೆ ಕವಿಸಾರ್ವಭೌಮನೆಂಬ ಬಿರುದನ್ನು ಕೊಡಿಸಿದೆ. ಓ ಶಾರದಾಂಬೆ, ಸದ್ಗುಣನಿಕುರುಂಬೆ, ಇನ್ನು ಮಹಾಧೀಶಾಲಿಯಾದ

ರಾವುಸಿಂಗ ಮಹೀಪಾಲನ ಒಡ್ಡೋಲಗದಲ್ಲಿ ನೀನು ನನ್ನ ಗೌರವವನ್ನು ಹೇಗೆ ಉಳಿಸುವೆಯೊ!)

ಈ ಪ್ರಾರ್ಥನೆಯಲ್ಲಿಯೇ ಶ್ರೀನಾಥನ ಹಿಂದಿನ ವೈಭವವೆಲ್ಲ ವರ್ಣಿತವಾಗಿದೆ. ಇಷ್ಟೆಲ್ಲ ಗೌರವ ಸಂಭಾವನೆಗಳು ತನಗೆ ದೊರೆತದ್ದು ಆ ವಾಗ್ದೇವಿಯ ಅಮಿತವಾದ ಅನುಗ್ರಹದಿಂದಲೇ ಎಂಬುದನ್ನು ನಮ್ಮ ಕವಿಯೂ ಬಲ್ಲನು. ಇಷ್ಟೆಲ್ಲ ಹಿರಿಮೆಯನ್ನು ಉಂಟುಮಾಡಿದ ಶಾರದಾಂಬೆಯೇ ಮುಂದೆಯೂ ತನ್ನನ್ನು ಸಂರಕ್ಷಿಸಬೇಕೆಂದು ಬೇಡಿಕೊಳ್ಳುತ್ತ ಶ್ರೀನಾಥನು ಆ ಕಾಲಕ್ಕೆ ರಾವುಸಿಂಗ ಭೂಪಾಲನ ಸಭೆಯ ಪಂಡಿತರ ವಿದ್ಯಾ ವೈಭವದ ವಿಷಯದಲ್ಲಿ ಹರಡಿದ್ದ ಗೌರವಭಾವವನ್ನು ವ್ಯಕ್ತಗೊಳಿಸಿದ್ದಾನೆ.

ಇಷ್ಟೆಲ್ಲ ವಿನಯಶೀಲನಾಗಿದ್ದರೂ ಶ್ರೀನಾಥನು ಸಮಯ ಬಿದ್ದಾಗ ಬಹಳ ನಿಷ್ಠುರವಾಗಿಯೂ ನುಡಿಯ ಬಲ್ಲವನಾಗಿದ್ದನು. ಅವನಿಗೆ ತನ್ನ ಶಕ್ತಿಯ ಅರಿವಿಲ್ಲದೆ ಹೋಗಿರಲಿಲ್ಲ. ಒಂದು ಸಲ ಅವನು ರಾಜಮಹೇಂದ್ರವರಕ್ಕೆ ಹೋಗಿದ್ದಾಗ ಅಲ್ಲಿನ ಪಂಡಿತರು ಶ್ರೀನಾಥನನ್ನು ಸರಿಯಾಗಿ ಗೌರವಿಸಲಿಲ್ಲವಂತೆ. ಬಹುಶಃ ಅವರು ಕೊಂಚ ಅಪಹಾಸ್ಯವೂ ಮಾಡಿರಬಹುದು. ಆಗ್ರಹೋದಗ್ರನಾದ ಶ್ರೀನಾಥನು ಕೂಡಲೆ ತನ್ನ ಆಶುಕವಿತೆಯ ಖಡ್ಗವನ್ನು ಅವರ ಮೇಲೆ ಬೀಸಿದನು :

ಬೋಧಮಲ್ಪಂಬು ಗರ್ವಮಭ್ಯುನ್ನತಂಬು
ಶಾಂತಿ ನಿಷ್ಪಚ್ಚರಂಬು ಮಚ್ಚರಮು ಘನಮು
ಕೂಪಮಂಡೂಕಮುಲಬೋಲೆ ಕೊಂಚಮೆಱಿಗಿ
ಪಂಡಿತಂಮನ್ಯುಲೈನ ವೈತಂಡಿಕುಲಕು

[ಬಾವಿಯೊಳಗಿನ ಕಪ್ಪೆಗಳಂತೆ ಇದ್ದುಕೊಂಡು ಕೊಂಚ ತಿಳಿದು ತಾವೇ ಪಂಡಿತರೆಂದು ಭಾವಿಸಿಕೊಂಡಿರುವ ಈ ವಿತಂಡಾವಾದಿ

ಗಳಿಗೆ ಜ್ಞಾನ ಸ್ವಲ್ಪ, ಗರ್ವ ಬಹಳ, ಶಾಂತಿ ಸೊನ್ನೆ, ಮತ್ಸರ ಹೆಚ್ಚು.] ಶ್ರೀನಾಥನ ಈ ಕ್ರೂರವಾದ ವಾಕ್ಪ್ರಹಾರದಿಂದ ಆ 'ಪಂಡಿತಂ ಮನ್ಯ'ರು ಎಚ್ಚೆತ್ತು ತಣ್ಣಗಾದರಂತೆ!

ಆಂಧ್ರಭಾಗವತವನ್ನು ಬರೆದ ಬಮ್ಮೆರ ಪೋತನನು ನಮ್ಮ ಶ್ರೀನಾಥ ಭಾವ* ಆತನಿಗೆ ರಾಜಾಶ್ರಯವೆಂದರೆ ಹಿಡಿಸದು. ಬಡತನದಲ್ಲಿದ್ದ ಆತನು ಜೀವನಕ್ಕಾಗಿ ಕೃಷಿಯನ್ನು ಅವಲಂಬಿಸಿದ್ದನು. ಶ್ರೀರಾಮಭಕ್ತನಾದ ಪೋತನ ತಾನು ಕಟ್ಟಿದ ಕವಿತೆಯನ್ನು ಯಾವ ರಾಯನಿಗೂ ಅಂಕಿತಮಾಡದೆ ಆ ಶ್ರೀರಾಮನಿಗೇ ಅರ್ಪಣೆ ಮಾಡಬೇಕೆಂಬ ಸಂಕಲ್ಪ ಹೊಂದಿದ್ದನು. ರಾವುಸಿಂಗ ಭೂಪಾಲನು ಆ ಕಾವ್ಯವನ್ನು ತನಗೆ ಅಂಕಿತ ಮಾಡುವಂತೆ ಪೋತನನನ್ನು ಒಡಂಬಡಿಸುವ ಸಲುವಾಗಿ ಶ್ರೀನಾಥನನ್ನೇ ಕಳುಹಿಸಿದನು. ಪರಿವಾರದೊಡನೆ ಬಹಳ ಅಟ್ಟಹಾಸದಿಂದ ಬಂದ ಶ್ರೀನಾಥನನ್ನು ಪೋತನನು ಆದರದಿಂದ ಬರಮಾಡಿಕೊಂಡನಾದರೂ ಅವನ ಸಲಹೆಯನ್ನು ಅಂಗೀಕರಿಸಲಿಲ್ಲ. "ಬಾಲರಸಾಲ ಸಾಲ ನವಪಲ್ಲವ ಕೋಮಲ"ವಾದ ಕಾವ್ಯಕನ್ನಿಕೆಯನ್ನು ಖೂಳರಿಗೆ ಕೊಟ್ಟು ಲಭಿಸುವ ಭಾಗ್ಯವನ್ನು ಅನುಭವಿಸುವುದಕ್ಕಿಂತ "ನಿಜದಾರಸುತೋದರ ಪೋಷಣಾರ್ಥ"ವಾಗಿ ಕವಿ ಹಾಲಿಕ (ಕೃಷೀವಲ) ನಾಗುವುದೇ ಉತ್ತಮವೆಂದು ಆತನು ಸಂದೇಹಕ್ಕೆಡೆಯಿಲ್ಲದಂತೆ ನುಡಿದು ಶ್ರೀನಾಥನ ಭೋಗೈಕಲಾಲಸತೆಯನ್ನು ಖಂಡಿಸಿದನು. ಆ ಕ್ಷಣದಲ್ಲಿ ಶ್ರೀನಾಥನಿಗೆ ಉತ್ಸಾಹ ಭಂಗವಾಯಿತು. ಆದರೆ ಅವನ ಸಹಜ ಗುಣವಾದ ರಸಿಕತೆ ತಗ್ಗಲಿಲ್ಲ; ಭೋಗಪರಾಯಣತೆ ಕುಗ್ಗಲಿಲ್ಲ.

---

* ಪೋತನ ಶ್ರೀನಾಥರು ಸಮಕಾಲೀನರಲ್ಲವೆಂದು ಚರಿತ್ರಕಾರರ ಮತ. ಆದರೆ ಬಹಳ ಕಾಲದಿಂದ ತೆಲುಗು ಜನ ಈ ಕವಿಗಳಿಬ್ಬರ ಬಾಂಧವ್ಯವನ್ನು ನಂಬಿದ್ದಾರೆ. ಇಲ್ಲಿ ಆ ಜನಶ್ರುತಿಯನ್ನು ಗೌರವಿಸಿದೆ.

ಶ್ರೀನಾಥನಿಗೆ ಆಮುಷ್ಮಿಕದೃಷ್ಟಿ ಬೆಳೆಯಲಿಲ್ಲ. ಅಂದರೆ ಅವನ ಗ್ರಂಥಗಳಲ್ಲಿ ಆಮುಷ್ಮಿಕವಾದ ವಿಷಯಗಳ ಪರಾಮರ್ಶೆಯಿಲ್ಲದೆ ಹೋಗಿಲ್ಲ. ಆದರೆ ಅದೆಲ್ಲ ಬಹಳ ಮಾಡಿ ಅವನು ಅನುವಾದ ಮಾಡಿದ ಮೂಲ ಗ್ರಂಥಗಳಲ್ಲಿನ ವಿಷಯಗಳೇ ಹೊರತು ಅವನ ಸ್ವಂತವಲ್ಲ. ವೇದಶಾಸ್ತ್ರಾಗಮ ಪುರಾಣಗಳನ್ನೆಲ್ಲ ಆಮೂಲಾಗ್ರ ವಾಗಿ ಓದಿದವನಾದರೂ ಶ್ರೀನಾಥನಿಗೆ ಐಹಿಕಭೋಗಾಪೇಕ್ಷೆ ತಗ್ಗ ಲಿಲ್ಲ. ಅವನು ಕೊನೆಯತನಕ ಐಹಿಕಸುಖಾಪೇಕ್ಷಿಯೂ ರಸಿಕಾಗ್ರ ಣಿಯೂ ಆಗಿದ್ದು ಉತ್ಸಾಹದ ಜೀವನವನ್ನು ನಡೆಸಿದನು. ಕಡೆ ಕಡೆಗೆ ಆಶ್ರಯ ವಿಹೀನನಾಗಿ ಕಡುಬಡತನಕ್ಕೆ ಸಿಕ್ಕಿದಾಗಲೂ ಶ್ರೀನಾಥನು ತನ್ನ ಆತ್ಮಪ್ರತ್ಯಯವನ್ನು ಕಳೆದುಕೊಳ್ಳಲಿಲ್ಲ.

ಶ್ರೀನಾಥನು ಬಹಳಕಾಲ ರಾಜಾಶ್ರಯದಲ್ಲಿದ್ದು ವೈಭವ ದಿಂದಲೇ ಬದುಕಿದನಾದರೂ ಅವನಿಗೆ ಆಶ್ರಯದಾತರಾದ ರೆಡ್ಡಿ ರಾಜರು ಮುಳುಗಿಹೋದಮೇಲೆ ಅವನು ಬಹಳ ಹೀನ ಸ್ಥಿತಿಗೆ ಇಳಿದನು. ದೇಶದಲ್ಲಿ ಅನೇಕ ಸಣ್ಣ ಸಣ್ಣ ರಾಜರು, ಚಿಲ್ಲರೆ ಶ್ರೀಮಂತರು, ಹೆಚ್ಚಾದರು. ಈ ಹೊಸ ಶ್ರೀಮಂತರು ಕಾವ್ಯಶ್ರೀಯನ್ನು ಕಂಡು ಮೆಚ್ಚಿ ಕವಿಯನ್ನು ಗೌರವಿಸುವಂಥವ ರಲ್ಲ. ಕೊಂಚ ಕಾಲದಮೇಲೆ ಓಢ್ರ ದೇಶದ ರಾಜರು ತೆಲುಗು ರಾಜ್ಯವನ್ನು ಆಕ್ರಮಿಸಿಕೊಂಡರು. ಅವರಿಗೆ ತೆಲುಗೇ ಬಾರದು. ಇನ್ನು ಅವರಿಗೆ ತೆಲುಗು ಸಾಹಿತ್ಯವೇನು ಅರ್ಥವಾಗಬೇಕು? ಇನ್ನು ಶ್ರೀನಾಥನಿಗೆ ರಾಜಾಶ್ರಯ ಹೇಗೆ ದೊರೆಯಬೇಕು? ಅವನು ಕವಿತ್ವವನ್ನು ಮೂಟೆ ಕಟ್ಟಿಟ್ಟು ಜೀವನಕ್ಕೆ ಬೇರೆ ದಾರಿ ಹಿಡಿಯಬೇಕಾಯಿತು. "ರಾಜ್ಯಾಲು ಉಡಿಗಿನಾ ಲಕ್ಷಣಾಲು ಉಡುಗವು" (ರಾಜ್ಯ ಕಳೆದುಹೋದರೂ ಹಳೆಯ ಲಕ್ಷಣಗಳು ಹೋಗಲಿಲ್ಲ) ಎಂಬ ಗಾದೆ ಶ್ರೀನಾಥನಿಗೆ ಚೆನ್ನಾಗಿ ಅನ್ವಯಿಸುತ್ತದೆ.

ಅವನು ನಿರಾಶ್ರಿತನಾಗಿ ಹೀನಸ್ಥಿತಿಗಿಳಿದಿದ್ದರೂ ಅವನ ಜೀವನ ಕ್ರಮ ವ್ಯತ್ಯಾಸವಾಗಲಿಲ್ಲ. ಅವನ ಭೋಗಲಾಲಸತೆ ತಗ್ಗಲಿಲ್ಲ. ಆದ್ದರಿಂದ ಅವನು ಆಗ ಆ ಓಢ್ರ ರಾಜರನ್ನೇ ಭೇಟಿಮಾಡಿ ಆಶ್ರಯಿಸಿ ಅವರಿಂದ ಒಂದು ಗ್ರಾಮವನ್ನು ಗುತ್ತಿಗೆಗೆ ಹಿಡಿದನು. ಕೃಷ್ಣಾತೀರದ ಬೊಡ್ಡುಪಲ್ಲಿ ಶ್ರೀನಾಥನ ಭೂವ್ಯವಸಾಯದ ಕಾರ್ಯಕ್ಷೇತ್ರವಾಯಿತು. ವೈಭವದ ಶಿಖರದಲ್ಲಿದ್ದಾಗ ತಾನು ತನ್ನ ಭಾವನಾದ ಪೋತನನನ್ನು ಹಾಲಿಕನೆಂದು ಹಾಸ್ಯಮಾಡಿದ ಕರ್ಮಫಲವಾಗಿ ಈಗ ಶ್ರೀನಾಥನು ಜೀವನಕ್ಕಾಗಿ ಹಾಲಿಕನೇ ಆಗಬೇಕಾಯಿತು! ನಿಯತಿಯನ್ನು ಮೀರಲು ಯಾರಿಂದಲೂ ಆಗದು.

ಶ್ರೀನಾಥನ ಈ ಗುತ್ತಿಗೆಬೇಸಾಯ ಎಷ್ಟು ಮಾತ್ರವೂ ಸುಖಪ್ರದವಾಗಲಿಲ್ಲ. ಅವನು ಆ ಹಳ್ಳಿಗಾಗಿ ರಾಜನಿಗೆ ಏಳನೂರು ಟಂಕಗಳನ್ನು ಸಲ್ಲಿಸಬೇಕಾಗಿತ್ತು. ಮೊದಲು ಮೊದಲು ಪೈರು ಸೊಂಪಾಗಿ ಬೆಳೆಯಿತು. ಆದರೆ ಫಲ ಕಾಲದಲ್ಲಿ ಅತಿವೃಷ್ಟಿಯಾಗಿ ಬೆಳೆ ಬಹಳ ನಷ್ಟವಾಯಿತು. ಉಳಿದುದನ್ನು ಇಲಿ, ಹೆಗ್ಗಣಗಳು ಮುಗಿಸಿಬಿಟ್ಟವು! ಕಂದಾಯದ ಹಣವೂ ಹೊರಡಲಿಲ್ಲ. ಶ್ರೀ ನಾಥನು ಬಹಳ ಸಂಕಟಕ್ಕೆ ಒಳಗಾದನು. ಓಢ್ರರಾಜರು ದಯಾರಹಿತರು. ಅವರು ಈ ಕವಿರಾಜನ ಕಷ್ಟವನ್ನು ಗಮನಿಸದೆ ಕಂದಾಯದ ವಸೂಲಿಯ ಕ್ರಮ ನಡೆಸಿದರು. ಆ ಕರುಣ ಕಥೆಯನ್ನು ಶ್ರೀನಾಥನೇ ವರ್ಣಿಸಿದ್ದಾನೆ:

ಕವಿರಾಜು ಕಂಠಂಬು ಕೌಗಿಲಿಂಚೆನುಗದಾ
ಪುರವೀಧಿನೆದುರೇಗ ಬೊಗಡ ದಂಡ,
ಆಂಧ್ರ ನೈಷಧ ಕರ್ತ ಯಂಘ್ರಿಯುಗ್ಮಂಬುನ
ದಗಿಲಿ ಯುಂಡೆನು ಗದಾ ನಿಗಳಯುಗಮು

ವೀರಭದ್ರಾರೆಡ್ಡಿ ವಿದ್ವಾಂಸು ಮುಂಜೇತ
ವಿಯ್ಯಮಂದೆನು ಗದಾ ವೆದುರು ಗೊಡಿಯು
ಸಾರ್ವಭೌಮುನಿ ಭುಜಾಸ್ತಂಭಮೆಕ್ಕೆನುಗದಾ
ನಗರಿ ವಾಕಿಟನುಂಡು ನಲ್ಲಗುಂಡು

ಕೃಷ್ಣವೇಣಮ್ಮ ಕೊನಿಪೋಯೆ ನಿಂತ ಫಲಮು
ಬಿಲಬಿಲಾಕ್ಷುಲು ದಿನಿ ಪೋಯೆ ತಿಲಲು ಪೆಸಲು
ಬೊಡ್ಡುಪಲ್ಲೆನು ಗೊಡ್ಡೇರಿ ಮೋಸಪೋತಿ
ನೆಟ್ಟು ಚೆಲ್ಲಿಂತು ಡಂಕಂಬುಲೇಡುನೂರ್ಲು

[ಕವಿರಾಜನ ಕೊರಳಿಗೆ ಅಪಮಾನಕರವಾದ ಈ ಹಾರವು ಬಿದ್ದಿತಲ್ಲಾ! ಆಂಧ್ರ ನೈಷಧಕರ್ತನ ಪಾದಗಳಿಗೆ ನಿಗಳ ಬಂಧನ ವಾಯಿತು. ವೀರಭದ್ರಾರೆಡ್ಡಿಯ ಮನ್ನಣೆಯ ಆಸ್ಥಾನ ವಿದ್ವಾಂಸನ ಮುಂಗೈಗೆ ಬಿದಿರಿನ ಕೋಳ ಬಿತ್ತು. ಕವಿಸಾರ್ವಭೌಮನ ಹೇಗಲಿಗೆ ಊರು ಬಾಗಿಲಿನ ಕರಿಯಗುಂಡು ಹೊರಿಸಲ್ಪಟ್ಟಿತು. ಕೃಷ್ಣವೇಣೀತಾಯಿ (ಕೃಷ್ಣಾನದಿ) ಯು ಇಷ್ಟು ಫಲವನ್ನು ಕೊಂಡುಹೋದಳು. ಉಳಿದುದನ್ನು ಇಲಿಗಳು, ಕ್ರಿಮಿಕೀಟಗಳು, ತಿಂದುಹಾಕಿದುವು. ಬೊಡ್ಡುಪಲ್ಲಿ ಎಂಬ ಈ ಕುಗ್ರಾಮಕ್ಕೆ ಬಂದು ಮೋಸಹೋದೆ. ಏಳುನೂರು ಟಂಕಗಳಷ್ಟು ಕಂದಾಯವನ್ನು ನಾನು ಹೇಗೆತಾನೆ ಸಲ್ಲಿಸಲಿ?]

ಶ್ರೀನಾಥನ ಈ ಆರ್ತಪರಿಸ್ಥಿತಿಯಲ್ಲಿ ಅವನು ಯಾರಿಂದ ಸಹಾಯಪಡೆದನೋ. ಯಾರು ಕನಿಕರಿಸಿದರೋ ತಿಳಿಯದು. ಅಂತು ಶ್ರೀನಾಥನು ವೃದ್ಧಾಪ್ಯದಲ್ಲಿ ಬಹಳ ಹೀನಸ್ಥಿತಿಗೆ ಇಳಿದನು. ಕೊನೆತನಕ ಅವನು ರಿಕ್ತಾವಸ್ಥೆಯಲ್ಲಿಯೇ ಇದ್ದನು. ಆದರೆ ಆತನು ತನ್ನ ಅಭಿಮಾನವನ್ನು ಮಾತ್ರ ಎಂದೂ ಕಳೆದುಕೊಳ್ಳಲಿಲ್ಲ, ಅವನ ಆತ್ಮ ಪ್ರತ್ಯಯ ಕುಗ್ಗಲಿಲ್ಲ. ಅವನು ದೇಹತ್ಯಾಗಕ್ಕೆ ಕೊಂಚ ಮೊದಲು ಹೀಗೆ ಹೇಳಿಕೊಂಡನೆಂದು ಪ್ರಸಿದ್ಧವಾಗಿದೆ:

ಕಾಶಿಕಾ ವಿಶ್ವೇಶುಗಲಿಸೆ ವೀರಾರೆಡ್ಡಿ
ರತ್ನಾಂಬರಂಬುಲೇ ರಾಯಡಿಚ್ಚು
ರಂಭಗೂಡೆ ದೆನುಂಗುರಾಯರಾಹತ್ತುಂಡು
ಕಸ್ತೂರಿಕೇ ರಾಜು ಪ್ರಸ್ತುತಿಂತು

ಸ್ವರ್ಗಸ್ಥುಡಯ್ಯೆ ವಿಸ್ಸನಮಂತ್ರಿ ಮಜಿ ಹೇಮ
ಪಾತ್ರಾನ್ನಮೆವ್ವಾನಿ ಪಂಕ್ತಿ ಗಲದು
ಕೈಲಾಸಗಿರಿ ಬಂಡೆ ಮೈಲಾರ ವಿಭುಡೇಗಿ
ದಿನವೆಚ್ಚಮೇರಾಜು ತೀರ್ಪಗಲಡು

ಭಾಸ್ಕರಡು ಮುನ್ನೆ ದೇವುನಿಪಾಲಿಕರಿಗೆ
ಗಲಿಯುಗಂಬುನ ನಿಕನುಂಡ ಗಷ್ಟಮನುಚು
ದಿವಿಜ ಕವಿವರು ಗುಂಡಿಯಲ್ ದಿಗ್ಗುರನಗ
ನರುಗುಚುನ್ನಾಡುಶ್ರೀನಾಥುಡಮರಪುರಿಕಿ

[ವೀರಾರೆಡ್ಡಿಯು ಕಾಶೀವಿಶ್ವೇಶ್ವರನನ್ನು ಸೇರಿಬಿಟ್ಟನು. ಇನ್ನು ರತ್ನಾಂಬರಗಳನ್ನು ಕೊಡುವ ರಾಯನು ಯಾರಿದ್ದಾನೆ? ತೆನುಗು ರಾಯನು ರಂಭೆಯನ್ನು ಸೇರಿದ. ಇನ್ನು ಕಸ್ತೂರಿಗಾಗಿ ಯಾವ ದೊರೆಯನ್ನು ಆಶ್ರಯಿಸಲಿ? ವಿಸ್ಸನ ಮಂತ್ರಿಯು ಸ್ವರ್ಗ ಸೇರಿದ. ಇನ್ನು ಹೇಮ ಪಾತ್ರಾನ್ನವು ಯಾರ ಪಂಕ್ತಿಯಲ್ಲಿ ಲಭಿಸುತ್ತದೆ? ಮೈಲಾರ ವಿಭುವು ಕೈಲಾಸ ಗಿರಿಯನ್ನು ಹತ್ತಿದನು. ಇನ್ನು ನನ್ನ "ದಿನ ವೆಚ್ಚವನ್ನು" ವಹಿಸುವವರು ಯಾರು? ಭಾಸ್ಕರನು ಮೊದಲೇ ದೇವರ ಸನ್ನಿಧಿಗೆ ಸೇರಿದನು. ಇನ್ನು ಕಲಿಯುಗದಲ್ಲಿ ಭೂಮಿಯ ಮೇಲೆ ಜೀವಿಸುವುದು ಕಷ್ಟವೆಂದು ಶ್ರೀನಾಥನು ಸ್ವರ್ಗಕ್ಕೆ ಹೋಗುತ್ತಿದ್ದಾನೆ. ದೇವಕವಿಯ ಎದೆ 'ದಿಗ್' ಎಂದು ಹೊಡೆದುಕೊಳ್ಳುತ್ತಿದೆ!]

"ಶ್ರೀನಾಥನು ತೆಲುಗುದೇಶ ಬಿಟ್ಟು ದೇವಲೋಕಕ್ಕೆ, ಇಂದ್ರ ಸನ್ನಿಧಿಗೆ, ಬರುತ್ತಿರುವನಲ್ಲಾ, ಇನ್ನು ನನ್ನ ಗತಿಯೇನು?" ಎಂದು

ದೇವಕವಿಯು ಪೆದರಿಕೊಂಡನೆಂದು ಶ್ರೀನಾಥನು ಹೇಳಿಕೊಂಡಿರುವುದು ಅವನ ಅಪ್ರತಿಹತವಾದ ಧೈರ್ಯದ ಕುರುಹಾಗಿದೆ. ಈ ಪದ್ಯದಲ್ಲಿ ಕವಿಯ ಪ್ರಧಾನ ಪೋಷಕರ ಒಂದು ಚಿಕ್ಕಪಟ್ಟಿ ದೊರೆಯುತ್ತದೆ. ಅಲ್ಲದೆ ರಾಜಾಶ್ರಯವಿದ್ದ ಕಾಲದಲ್ಲಿ ಶ್ರೀನಾಥನು ಅನುಭವಿಸಿದ ಭೋಗ ವೈಭವವೆಲ್ಲ ಇಲ್ಲಿ ಸೂಚ್ಯವಾಗಿದೆ. ಆ ಕಾಲದ ತೆಲುಗು ರಾಜರ ಕಾವ್ಯಾಭಿಮಾನ ಕವಿಗೌರವಗಳು ಕೊಂಡಾಡತಕ್ಕವು. ಶ್ರೀನಾಥನು ಬಾಲ್ಯದಿಂದ ರಾಜಮನ್ನಣೆಗೆ ಪಾತ್ರನಾದ ಕವಿ. ತೀರ ಕಡೆಗಾಲದಲ್ಲಿ ಅವನು ನಿರಾಶ್ರಿತನಾಗಿ ದುಃಖಕ್ಕೀಡಾದನು. ಆದರೆ ಕಷ್ಟ ಕಾರ್ಪಣ್ಯಗಳು ಆತನ ಧೈರ್ಯೋತ್ಸಾಹಗಳನ್ನು ಕುಗ್ಗಿಸಲಿಲ್ಲ: ರಸಿಕತೆಯನ್ನು ತಗ್ಗಿಸಲಿಲ್ಲ. ಶ್ರೀನಾಥನು ಕಡೆತನಕ ತನ್ನ ಆತ್ಮಪ್ರತ್ಯಯವನ್ನು ಕಳೆದುಕೊಳ್ಳದೆ ಕಾವ್ಯರಚನೆಯನ್ನು ಮಾಡಿ ಜನಪ್ರೀತಿಯನ್ನು ಗಳಿಸಿದನು.

## ಶ್ರೀನಾಥನ ಕೃತಿಗಳು

ಶ್ರೀನಾಥನು ಹಲವು ಕಾವ್ಯಗಳನ್ನು ವಿರಚಿಸಿದ್ದಾನೆ. ಅವುಗಳಲ್ಲಿ ಪ್ರಸಿದ್ಧವಾದವು: ಶೃಂಗಾರನೈಷಧಂ, ಕಾಶೀಖಂಡಂ, ಭೀಮೇಶ್ವರ ಪುರಾಣಂ, ಹರವಿಲಾಸಮು, ವೀಧಿನಾಟಕಂ, ಪಲ್ನಾಟಿವೀರ ಚರಿತ, ಮತ್ತು ಶಿವರಾತ್ರೀ ಮಾಹಾತ್ಮ್ಯಂ. ಇವಲ್ಲದೆ ಮರುತ್ತರಾಯ ಚರಿತ್ರ, ಶಾಲಿವಾಹನ ಸಪ್ತಶತಿ. ನಿಗಮಾರ್ಥಸಾರ ಸಂಗ್ರಹಂ ಮುಂತಾದ ಕೃತಿಗಳನ್ನೂ ಶ್ರೀನಾಥನು ಬರೆದಿರುವನೆಂದು ಪ್ರತೀತಿಯಿದೆ. ಆದರೆ ಅವು ಸಿಕ್ಕಿಲ್ಲ.

ದೊರೆತಿರುವ ಕೃತಿಗಳಲ್ಲಿ 'ಪಲ್ನಾಟಿವೀರಚರಿತ್ರ'ಯು ದ್ವಿಪದೀ ಛಂದಸ್ಸಿನ ಕಾವ್ಯ. ಇದರ ವಸ್ತು ಪಲ್ನಾಡಿನಲ್ಲಿ ಪ್ರಚಾರದಲ್ಲಿದ್ದ

ಒಂದು ಜಾನಪದ ಕಥೆ*. ಇದರ ಭಾಷೆಯೂ ಸಾಧಾರಣವಾಗಿದೆ. ಶ್ರೀನಾಥನಂಥ ಪಂಡಿತ ಕವಿಯು ಇಂಥಾ ಕಾವ್ಯವನ್ನು ರಚಿಸಿರಲಾರನೆಂದೂ ಇನ್ನಾರೋ ಸಾಧಾರಣ ಕವಿ ಇದನ್ನು ರಚಿಸಿ ಶ್ರೀನಾಥನ ಹೆಸರಿನಲ್ಲಿ ಪ್ರಕಟಿಸಿರಬೇಕೆಂದೂ ಒಂದು ವಾದವಿದೆ. ಶ್ರೀನಾಥನು ರಾಜಾಶ್ರಯದಲ್ಲಿಯೇ ಇದ್ದು ಪಂಡಿತಮಾನ್ಯನಾಗಿ ಹಲವು ಪ್ರೌಢಕಾವ್ಯಗಳನ್ನು ರಚಿಸಿರುವುದುಂಟು. ಆದರೆ ರಾಜಾಶ್ರಯ ತಪ್ಪಿಹೋಗಿ ವೃದ್ಧಾಪ್ಯದಲ್ಲಿ ಅಸಹಾಯನಾಗಿ ಪಲ್ನಾಡು ಸೇರಿ ಅಲ್ಲಿ ಜನಪ್ರೀತಿಗಳಿಸುವುದಕ್ಕಾಗಿ ಪಾಮರ ರಂಜಕವಾದ ರೀತಿಯಲ್ಲಿ ಪಲ್ನಾಟಿವೀರಚರಿತೆ, ಕಾಟಮ ರಾಜುಕಥ ಮುಂತಾದ ಗ್ರಂಥಗಳನ್ನು ರಚಿಸಿದನೆಂದು ಇನ್ನೊಂದು ವಾದ. ಇದು ಹೀಗೆಯೇ ಸರಿಯೆಂದು ಸ್ಥಾಪಿಸಲು ಸಾಧ್ಯವಿಲ್ಲ. ಶ್ರೀನಾಥನ ಹಲವು ಚಾಟುಪದ್ಯಗಳನ್ನು ಗಮನಿಸಿದರೆ ಅವನು ಲೀಲಾಜಾಲವಾಗಿ ಆಶುಕವಿತೆ ಮಾಡಬಲ್ಲವನಾಗಿದ್ದನೆಂದೂ ಲಲಿತ ಶೈಲಿಯಲ್ಲಿಯೂ ಕೃತಿ ರಚಿಸಬಲ್ಲವನಾಗಿದ್ದನೆಂದೂ ತಿಳಿಯುತ್ತದೆ. ಅಂಥವನು ಈ ಕಾವ್ಯಗಳನ್ನು ರಚಿಸಿದ್ದರೆ ಆಶ್ಚರ್ಯವೇನೂ ಇಲ್ಲ. ಅಲ್ಲದೆ ಇವು ಶ್ರೀನಾಥನ ಕೃತಿಗಳೆಂದೇ ತೆಲುಗು ದೇಶದ ಜನ ನಂಬಿದ್ದಾರೆ. ಈ 'ಜನಶ್ರುತಿ'ಯನ್ನು ನಿರಾಕರಿಸಲು ಸಾಕಷ್ಟು ಕಾರಣಗಳಿಲ್ಲ. ಈ ಕಾವ್ಯದಲ್ಲಿ ಪಲ್ನಾಡಿನ ವೀರರ ಶೌರ್ಯ ವರ್ಣನೆ ಮುಖ್ಯ ಧ್ಯೇಯ. ಕಾರೆಂಪೂಡಿ ಯುದ್ಧ, ಬ್ರಹ್ಮನಾಯಕ, ಬಾಲಚಂದ್ರ, ನಾಗಮ್ಮ ಮೊದಲಾದವರ ವೃತ್ತಾಂತಗಳು ಈ ಕಾವ್ಯದಲ್ಲಿ ವಿಸ್ತಾರವಾಗಿ ವರ್ಣಿತವಾಗಿವೆ. ಅಭಿಮನ್ಯುವಿನ ಕಥೆಯನ್ನು ಹೋಲುತ್ತದೆ, ಈ ಬಾಲಚಂದ್ರವೃತ್ತಾಂತ.

---

* ಈ ಕಾವ್ಯವನ್ನೇ ಆಧಾರವಾಗಿಟ್ಟುಕೊಂಡು ದಿ|| ನಂಜುಂಡಶಾಸ್ತ್ರಿಗಳು 'ನಾಯಕಮಣಿ' ಯೆಂಬ ಕಥೆಯನ್ನು ಕನ್ನಡದಲ್ಲಿ ಬರೆದು ಪ್ರಕಟಿಸಿದ್ದಾರೆ.

ಈ ಕಾವ್ಯ ತೆಲುಗು ಜನತೆಯಲ್ಲಿ ಬಹಳ ಪ್ರಿಯವಾಗಿ ವಿಶೇಷ ಪ್ರಚಾರ ಹೊಂದಿದೆ.

## ಕಾಶೀಖಂಡ

ಹೆಸರು ಶ್ರೀನಾಥನಾದರೂ ನಮ್ಮ ಕವಿ ಮಹಾ ಶಿವಭಕ್ತ. ಅವನು ಪ್ರಾಸಾದ ಪಂಚಾಕ್ಷರೀ ಮಂತ್ರೋಪಾಸಕನಾಗಿದ್ದನಂತೆ. ಅವನಿಗೆ ಶಿವನು ಪರಮೋಪಾಸ್ಯದೇವತೆ. ಆತನ ಗುಣಗಾನ ಮಹಿಮಾನಿರೂಪಣೆಗಳು ಶ್ರೀನಾಥನಿಗೆ ಬಹಳ ಪ್ರಿಯವಾದ ವಿಷಯಗಳು. ಆದ್ದರಿಂದಲೇ ಆತನು "ಕಾಶೀಖಂಡ–" ವೆಂಬ ಸಂಸ್ಕೃತಗ್ರಂಥವನ್ನು ತೆಲುಗಿಸಿದ್ದಾನೆ. ಇದು ಸ್ಕಾಂದಪುರಾಣದ ಒಂದು ಭಾಗ. ಕಾಶೀಕ್ಷೇತ್ರದ ಮಹಿಮೆಯನ್ನು ಹೊಗಳಿ ಹಾಡುವುದು ಇಲ್ಲಿ ಕವಿಯ ಉದ್ದೇಶ. ಅದಕ್ಕೆ ಅನುಕೂಲವಾಗುವಂತೆ ಅನೇಕ ಪುಣ್ಯಕಥೆಗಳನ್ನೂ ಇಲ್ಲಿ ಅಳವಡಿಸಲಾಗಿದೆ. "ಪುಣ್ಯಾಖ್ಯಾನಂಬುಲೇಕೋತ್ತರ ಶತಂಬುಲುನು ಗಲಿಗಿನದಿ "(ನೂರೊಂದು ಪುಣ್ಯಕಥೆಗಳಿದರಲ್ಲಿವೆ) ಎಂದು ಶ್ರೀನಾಥನೇ ಹೇಳಿಕೊಂಡಿದ್ದಾನೆ. ಈ ಕಾವ್ಯದಲ್ಲಿ ಕಾಶೀಕ್ಷೇತ್ರದ ತೀರ್ಥಾದಿಗಳ ವಿಸ್ತೃತವಾದ ವರ್ಣನೆಯಿದೆ. ಅದಕ್ಕಿಂತ ಹೆಚ್ಚಾಗಿ ಅವುಗಳ ಹಿಂದಿನ ವೃತ್ತಾಂತ ನಿರೂಪಣೆಯಿದೆ. ಮಣಿಕರ್ಣಿಕಾಸಮುದ್ಭವಂ, ಗಂಗಾಮಹಾತ್ಮ್ಯ, ಭೈರವಾವಿರ್ಭಾವ, ಪಂಚನದೋತ್ಪತ್ತಿ, ಮೊದಲಾದ ಅನೇಕ ಪೂರ್ವಕಥೆಗಳು ಇದರಲ್ಲಿವೆ. ವಿಶಾಲಾಕ್ಷೀ ಮಹಿಮೆ, ವೀರಭದ್ರ ವಿಜಯದಕಥೆ ಮುಂತಾದ ಅನೇಕ ಕಥೆಗಳು ಇಲ್ಲಿವೆ. ಶ್ರೀನಾಥನು ಈ ಕಾವ್ಯದಲ್ಲಿ ಶಿವಭಕ್ತರಿಗೆ ಪ್ರಿಯವಾದ, ಪೂಜ್ಯವಾದ ಅನೇಕ ಕಥೆಗಳನ್ನು ಜೋಡಿಸಿದ್ದಾನೆ. ಈ ಕಾವ್ಯವನ್ನು ಕುರಿತು ಶ್ರೀನಾಥನ ಸ್ವಂತ ಅಭಿಪ್ರಾಯವನ್ನು ಕೇಳಿ.

ಆಶಾಸ್ಯಂಬುಲು ಸಂಘಟಿಂಚುನುಬಹೂಪಾಖ್ಯಾನ ಶಾಖೋಪಶಾ
ಖಾಶೋಭಾಸಮುದಂಚಿತಾಭ್ಯುದಯಮೈ ಸ್ಕಾಂದಬ್ಧಿ ಸಂಜಾತಮೈ
ಯೀಶಾನುಗ್ರಹಲಬ್ಧಮುಕ್ತಿ ಫಲಮೈ ಯೆಕ್ಕಾಲಮುನ್‌ಶ್ರೋತಕುನ್
ಗಾಶೀಖಂಡಮಖಂಡವೈಭವಮುನನ್ ಗಲ್ಪದ್ರುಮಪ್ರಕ್ರಿಯನ್

(ಸ್ಕಾಂದಪುರಾಣವೆಂಬ ಅಂಬುಧಿಯಲ್ಲಿ ಸಂಜನಿಸಿದ ಕಲ್ಪದ್ರುಮ ದೋಪಾದಿಯಲ್ಲಿದೆ, ಈ ಕಾಶೀಖಂಡ. ಇದರ ಅನೇಕಾನೇಕ ಉಪಾಖ್ಯಾನಗಳೇ ಇದರ ಕೊಂಬೆಗಳು, ಈಶ್ವರಾನುಗ್ರಹದಿಂದ ಲಭಿಸುವ ಮುಕ್ತಿಯೇ ಇದರ ಹಣ್ಣು. ಇದು ಎಲ್ಲಾ ಕಾಲಕ್ಕೂ ಶೋಭಿಸುತ್ತಿರುತ್ತದೆ.)

ಇದು ಒಂದು ಕ್ಷೇತ್ರದ ಮಹಾತ್ಮ್ಯವರ್ಣನೆಯೇ ಮುಖ್ಯವಾಗಿ ಉಳ್ಳ ಕಾವ್ಯವಾದರೂ ಶ್ರೀನಾಥನ ಕೈಗೆ ಸಿಕ್ಕಿ ರಮಣೀಯ ಕಾವ್ಯ ವಾಗಿದೆ! ಆತನ ಕವಿತಾಪ್ರೌಢಿಮೆ ಇಲ್ಲಿ ಅತ್ಯಂತ ಉನ್ನತಿಗೇರಿದೆ ಯೆಂದು ಭಾವಿಸಿದರೆ ತಪ್ಪಲ್ಲ. ಈ ಪುಣ್ಯಗ್ರಂಥದಲ್ಲಿಯೂ ಶ್ರೀನಾಥನು ಸಮಯೋಚಿತವಾಗಿ ಶೃಂಗಾರ ಹಾಸ್ಯಗಳನ್ನು ತಂದು ಕಾವ್ಯದ ಶೋಭೆಯನ್ನು ಹೆಚ್ಚಿಸಿದ್ದಾನೆ.

## ಶೃಂಗಾರ ನೈಷಧ

ಸಂಸ್ಕೃತದಲ್ಲಿ ಶ್ರೀಹರ್ಷನು ಬರೆದ ಕಾವ್ಯಕ್ಕೆ "ನೈಷಧೀಯ ಚರಿತಂ" ಎಂದು ಹೆಸರು. ಆದರೆ ನಮ್ಮ ಶ್ರೀನಾಥನು ಆ ಹೆಸರನ್ನು ಮೆಚ್ಚದೆ ಅದಕ್ಕೆ "ಶೃಂಗಾರನೈಷಧಂ" ಎಂದು ಹೆಸರಿಟ್ಟು ಅದನ್ನು ಶೃಂಗರಿಸಿದ್ದಾನೆ. ಮೂಲಕಾವ್ಯದಲ್ಲಿ ನಳನ ಚರಿತ್ರೆ ಸಂಪೂರ್ಣವಾಗಿಲ್ಲ. ಮಹಾಭಾರತದ ವನಪರ್ವದಲ್ಲಿ ಬರುವ ನಳಚರಿತ್ರೆಯನ್ನೇ ಆಧಾರವಾಗಿಟ್ಟುಕೊಂಡು ಕೃತಿರಚನೆ ಮಾಡಿದ್ದರೂ ಹರ್ಷನು ಅದನ್ನು ದಮಯಂತೀ ವಿವಾಹ ಕಥೆ

ಯಾಗುತ್ತಲೂ ಸಿಲ್ಲಿಸಿದ್ದಾನೆ. ದಮಯಂತಿಯು ಇಂದ್ರಾದಿ ದೇವತೆಗಳನ್ನೆಲ್ಲ ತಿರಸ್ಕರಿಸಿ ಮಾನವಮಾತ್ರನಾದ ನಳನನ್ನು ಮದುವೆಯಾದಳೆಂದು ಕೇಳಿದ ಕಲಿಯು ಬಹಳವಾಗಿ ಕನಲಿ ನಳನ ರಾಜಧಾನಿಗೆ ಬಂದು ಅವನಮೇಲೆ ಸೇಡು ತೀರಿಸಿ ಕೊಳ್ಳಲು ಸಮಯ ಕಾಯುತ್ತಿದ್ದನೆಂದು ಒಂದು ಸೂಚನೆಯಿ ದೆಯೇ ಹೊರತು ಆ ಮುಂದಿನ ಕಥೆಯಿಲ್ಲ. ಆದ್ದರಿಂದ ಶ್ರೀ ಹರ್ಷನ ಕಾವ್ಯವು ಅಪೂರ್ಣವೆಂದೇ ಅನೇಕ ಪಂಡಿತರ ಮತ. ಅದಕ್ಕೆ "ನೈಷಧೀಯ ಚರಿತಂ" ಎಂಬ ಹೆಸರು ಒಪ್ಪುವುದಿಲ್ಲ ವೆಂದೂ ದಮಯಂತೀ ವಿವಾಹವೆಂದಾಗಲಿ, ಸ್ವಯಂವರ ವೆಂದಾಗಲಿ ಹೆಸರಿಡಬೇಕಾಗಿದ್ದಿತೆಂದೂ ವಾದಿಸುವವರಿದ್ದಾರೆ. ಅದು ಹೇಗೇ ಇದ್ದರೂ ನಮ್ಮ ತೆಲುಗು ಕವಿ ಶ್ರೀನಾಥನು ತನ್ನ ಕಾವ್ಯಕ್ಕೆ "ಶೃಂಗಾರನೈಷಧ"ವೆಂದು ಹೆಸರಿಟ್ಟು ತನ್ನ ರಸಿಕತೆ ಯನ್ನೂ ಔಚಿತ್ಯಜ್ಞಾನವನ್ನೂ ಮೆರೆದಿದ್ದಾನೆ.

ಶ್ರೀನಾಥನಿಗೆ ಶೃಂಗಾರರಸ ನಿರೂಪಣೆಯಲ್ಲಿ ಅಮಿತವಾದ ಮೋಹ. ಅವನಿಗೆ ಈ ಕಥಾವಸ್ತು ದೊರೆತದ್ದು ಹುಡುಗನ ಕೈಲಿ ಹಣ್ಣು ಸಿಕ್ಕಿದ ಹಾಗೆ ಆಗಿದೆ. ನಳ ದಮಯಂತಿಯರು ಪರಸ್ಪರ ಕೀರ್ತಿಯನ್ನು ಕೇಳಿ ಪ್ರಣಯ ಪರವಶರಾಗಿ ಅನುಭವಿಸಿದ ವಿರಹ ಶೃಂಗಾರವನ್ನೂ ಅವರು ಮದುವೆಯಾದ ಮೇಲೆ ಅನುಭವಿಸಿದ ಆಮೋದ ಪ್ರಮೋದಗಳನ್ನೂ ಶ್ರೀನಾಥನು ತನ್ನದೇ ಆದ ರೀತಿಯಲ್ಲಿ ಬಹಳ ಉತ್ಸಾಹದಿಂದ ವರ್ಣಿಸಿ ಆನಂದಿಸಿದ್ದಾನೆ.

ಮಹಾ ಪ್ರೌಢವಾದ ಈ ಕಾವ್ಯವನ್ನು ತೆಲುಗಿಗೆ ಅನುವಾದ ಮಾಡುವಾಗ ಶ್ರೀನಾಥನು 'ಮಕ್ಕೀಕಾ ಮಕ್ಕಿ' ಯಾಗಿ ಅನುವಾದ ಮಾಡದೆ ಸ್ವಾತಂತ್ರ್ಯ ವಹಿಸಿ ಕೆಲವು ಪ್ರಕರಣಗಳನ್ನು ಕುಗ್ಗಿಸಿ, ಇನ್ನು ಕೆಲವನ್ನು ವಿಸ್ತರಿಸಿ, ಕೆಲವನ್ನು ಬಿಟ್ಟುಬಿಟ್ಟು ತನ್ನ

ಅಭಿರುಚಿಯನ್ನು ಮೆರೆದಿದ್ದಾನೆ. "ಔಚಿತ್ಯವನ್ನು ಆದರಿಸಿ ಅನೌಚಿತ್ಯವನ್ನು ಪರಿಹರಿಸಿ ತನ್ನ ಕಾವ್ಯವು ಅಶೇಷ ಮನೀಷಿ ಜನಕ್ಕೆ ಹೃದಯಂಗಮವಾಗುವಂತೆ, ಆಚಂದ್ರತಾರಾರ್ಕವಾಗಿ ಶೋಭಿಸುವಂತೆ ರಚಿಸಿರುವೆ"ನೆಂದು ಶ್ರೀನಾಥನೇ ತನ್ನ ಕಾವ್ಯದ ಕೊನೆಯಲ್ಲಿ ಹೇಳಿಕೊಂಡಿದ್ದಾನೆ. ಹೀಗೆ ಮಾಡುವಾಗ ಮೂಲದ ಇಪ್ಪತ್ತೆರಡು ಸರ್ಗಗಳು ತೆಲುಗಿನಲ್ಲಿ ಎಂಟು ಆಶ್ವಾಸಗಳಾಗಿವೆ. ಆದರೆ ಮೂರ್ತಿ ಚಿಕ್ಕದಾದರೂ ಅದರ ಕೀರ್ತಿಯೇನೂ ಚಿಕ್ಕದಾಗಿಲ್ಲ.

ಮೂಲಕಾವ್ಯದಲ್ಲಿ ನಳಮಹಾರಾಜನ ಸೌಂದರ್ಯಾತಿಶಯ ವನ್ನು ವರ್ಣಿಸ ಹೊರಟು, ಪಾರ್ವತಿ, ಲಕ್ಷ್ಮಿ, ವಾಣಿ, ಶಚಿಯರು ಕೂಡ ಚಲಿತಚಿತ್ತರಾದರೆಂದು ಹರ್ಷನು ಹೇಳಿದ್ದಾನೆ. ಶಿವಭಕ್ತ ನಾದ ಶ್ರೀನಾಥನು ಇಂಥಾ ಅನುಚಿತವಾದ ಹೇಳಿಕೆಯನ್ನು ಸಹಿಸು ವುದು ಸಾಧ್ಯವೆ? ಆವನು ಈ ಐದು ಶ್ಲೋಕಗಳನ್ನು ನಿಶ್ಚಿಂತೆ ಯಿಂದ ಕೈಬಿಟ್ಟಿದ್ದಾನೆ. ಇನ್ನು ಕೆಲವು ಮೂಲ ಶ್ಲೋಕಗಳು ಅನೇಕಾರ್ಥ ದ್ಯೋತಕಗಳಾಗಿದ್ದು ವಾಚಕರಿಗೆ ಅತ್ಯಂತ ದುರ್ಬೋಧ ವಾಗಿರುವುದರಿಂದಲೋ ಏನೋ ಅವುಗಳನ್ನು ಶ್ರೀನಾಥನು ಕೈ ಬಿಟ್ಟಿದ್ದಾನೆ.

ಶೃಂಗಾರ ನೈಷಧದಲ್ಲಿ ಶ್ರೀನಾಥನ ಕವಿತಾಶಕ್ತಿ ಅತ್ಯಂತ ಔನ್ನತ್ಯವನ್ನು ಹೊಂದಿದೆಯೆನ್ನಬಹುದು. ಸನ್ನಿವೇಶರಚನೆ, ಪಾತ್ರ ಪೋಷಣಗಳಲ್ಲಿ ಕವಿ ಬಹಳ. ನಿಪುಣತೆಯನ್ನು ಮೆರೆದಿದ್ದಾನೆ. ಇನ್ನು ಅವನ ವರ್ಣನಾ ಕೌಶಲವನ್ನು ಹೊಗಳಿ ಮುಗಿಸಲು ಶಕ್ಯವಲ್ಲ. ನಳನ ವಿವಾಹ ಸಮಯದಲ್ಲಿ ಮಾವನು ಅವನಿಗೆ ಕೊಟ್ಟ ಹಲವು ಉಡುಗೊರೆಗಳನ್ನು ವರ್ಣಿಸುತ್ತ ರಚಿಸಿರುವ ಈ ಎರಡು ಪದ್ಯಗಳನ್ನು ಕೇಳಿ:

ಜಮುನಿನಾಲುಕ ತ್ರೋನೆಕಸಕ್ಕೆಮಾತ
ದಮುಕಪಡು ಕ್ರೊತ್ತಪೈಡಿಮೊಳಪು ಗಟಾರಿ
ಭೀಮಪಿಭುಡಿಚ್ಚಿ ಗಾರಾವುಬೆದ್ದ ಪೆಂಡ್ಲಿ
ಕೊಡುಕುಕಿಚ್ಚಿಕು ನೈಷಧಕ್ಷೋಣಿಪತಿಕಿ

(ಯಮುನೊಡನೆ ಸರಸವಾಡಲು ತವಕಪಡುವ ಚಿನ್ನದ ಮುಲಾಮು ಮಾಡಿದ ಹೊಸ ಕಠಾರಿಯೊಂದನ್ನು ಭೀಮರಾಜನು ತನ್ನ ಪ್ರೀತಿಯ ಅಳಿಯನಿಗೆ ಕೊಟ್ಟನು.)

ವೀರಮಾಹೇಶ್ವರಾಚಾರಪಾರಗುನಕು
ದನಕು ಶಿವಿಪೌಳಿಯೊಸಗಿನ ಕನಕರಥಮು
ಗಾಮುಗಮುನಂಬು ನೈಷಧಕ್ಷ್ಮಾಧವುನಕು
ಮಾಮ ಯಿಚ್ಚೆನು ಮಾಯನಿ ಮಹಿ ನುತಿಂಪ

[ವೀರಮಾಹೇಶ್ವರಾಚಾರದಲ್ಲಿ ಪಾರಂಗತನಾದ ನಳಮಹಾರಾಜನಿಗೆ 'ಕಾಮಗಮನ' ಶಕ್ತಿಯುಳ್ಳ (ಬೇಕಾದ ಕಡೆಗೆ ಹೋಗುವುದು) ಶಿವನೇ ತನಗೆ ಕೊಟ್ಟಂಥ ಒಂದು ದಿವ್ಯವಾದ ಕನಕರಥವನ್ನು ಅರಸನು ಕೊಡಲು ಜನ ಸಂಭ್ರಮದಿಂದ ಸ್ತೋತ್ರ ಮಾಡಿದರು.]

ಇಲ್ಲಿ ಶ್ರೀನಾಥನು ನಳಮಹಾರಾಜನನ್ನೂ ಮಾಹೇಶ್ವರಾಚಾರಕ್ಕೆ ಸೇರಿಸಿರುವುದು ಗಮನಾರ್ಹವಾದ ವಿಷಯ; ಕವಿಗೆ ಪ್ರಿಯವಾದ ಧರ್ಮವು ಕಾವ್ಯದ ನಾಯಕನಿಗೂ ಇಲ್ಲಿ ಅನ್ವಯವಾಗಿದೆ.

ಶ್ರೀನಾಥನು ಅನುವಾದ ಮಾಡುವಾಗ ಹೀಗೆ ಅಲ್ಲಲ್ಲಿ ಕೊಂಚ ಸ್ವಾತಂತ್ರ್ಯವನ್ನು ವಹಿಸಿದ್ದರೂ ಮೂಲದ ಸೊಬಗು ಕೆಡದಂತೆ ಬಹಳ ಸುಂದರವಾಗಿ ಕಾವ್ಯವನ್ನು ನಡೆಸಿದ್ದಾನೆ. ಒಂದೊಂದು ಸನ್ನಿವೇಶವೂ ಓದುಗರ ಮನಸ್ಸನ್ನು ಆಕರ್ಷಿಸುತ್ತದೆ. ಇಂದ್ರಾದಿ

ಗಳು ನಳನನ್ನು ತಮ್ಮ ದೂತನಾಗಿ ದಮಯಂತಿಯಲ್ಲಿಗೆ ಕಳುಹಿಸಿದಾಗ ನಡೆಯುವ ನಳದಮಯಂತಿಯರ ಸಂಭಾಷಣೆಯ ಸ್ವಾರಸ್ಯಾತಿಶಯವನ್ನು ಮಾತಿನಲ್ಲಿ ಹೇಳಿ ಮುಗಿಸುವುದಕ್ಕಾಗುವುದಿಲ್ಲ. ಅದು ಶ್ರೀನಾಥನ ಕವಿತಾಸಾಮರ್ಥ್ಯಕ್ಕೆ ಸಾಕ್ಷಿಯಾಗಿದೆಯೆಂದು ಮಾತ್ರ ಹೇಳಬಹುದು. "ಶೃಂಗಾರ ನೈಷಧ"ವನ್ನು ಆಮೂಲಾಗ್ರವಾಗಿ ಓದಿದಮೇಲೆ ಇದನ್ನು ತೆಲುಗರು ತಮ್ಮ ಭಾಷೆಯ ಪಂಚ ಮಹಾಕಾವ್ಯಗಳಲ್ಲಿ ಒಂದೆಂದು ಭಾವಿಸಿರುವುದರಲ್ಲಿ ಆಶ್ಚರ್ಯವೇನೂ ಇಲ್ಲವೆನಿಸುವುದು. ಕಾವ್ಯದ ಕೊನೆಯಲ್ಲಿರುವ ಈ ಪದ್ಯದಿಂದ ಶ್ರೀನಾಥನ ಕಾವ್ಯೋದ್ದೇಶವು ಸ್ಪಷ್ಟವಾಗುತ್ತದೆ.

ನಲಚಕ್ರವರ್ತಿ ಪುಣ್ಯಶ್ಲೋಕುಡಗುಟನು ದಮಯಂತಿಪತಿ ದೇವತಾವತಂಸ
ಮಗುಟನಪ್ಪರಮು ಭವ್ಯಪುರಂಧ್ರಿ ಪುರುಷುಲ ಚರಿತಂಬು ಸತ್ಕಾವ್ಯಸರಣಿ
ಗೂರ್ಚಿ
ಚಿಂತಾಮಣಿಮಂತ್ರಸಿದ್ಧುಂಡುಪಾಧ್ಯಾಯಭಟ್ಟಹರ್ಷುಂಡುವಾಕ್ಪ್ರೌಢಿ
ಮೆಱಿಯ
ಜೆಪ್ಪಿನ ನೈಷಧಶೃಂಗಾರಕಾವ್ಯಂಬು ದೆಲಿಯ ಜೆಪ್ಪಿತಿನಾಂಧ್ರದೇಶಭಾಷ

(ಪುಣ್ಯಶ್ಲೋಕನಾದ ನಳಮಹಾರಾಜ, ಪತಿವ್ರತಾ ಶಿರೋಮಣಿಯಾದ ದಮಯಂತಿ, ಇವರ ಕಥೆಯನ್ನು ಚಿಂತಾಮಣಿ ಮಂತ್ರಸಿದ್ಧನಾದ ಉಪಾಧ್ಯಾಯ ಭಟ್ಟ ಹರ್ಷನು ಪ್ರೌಢಭಾಷೆಯಲ್ಲಿ ಬರೆದುದನ್ನು ಮೆಚ್ಚಿ ಈ ಶೃಂಗಾರ ಕಾವ್ಯವನ್ನು ಆಂಧ್ರಭಾಷೆಯಲ್ಲಿ ಹೇಳಿದೆನು). ನಳದಮಯಂತಿಯರ ಕಥೆಯಷ್ಟೇ ಅಲ್ಲದೆ ಶ್ರೀಹರ್ಷನ ವಾಕ್ಪ್ರೌಢಿಮೆ ಶ್ರೀನಾಥನನ್ನು ಆಕರ್ಷಿಸಿತು!

### "ಹರವಿಲಾಸಮು"

ಶ್ರೀನಾಥನು ವೃದ್ಧಾಪ್ಯದಲ್ಲಿ ಬರೆದ ಈ ಕೃತಿ ಮಿಕ್ಕ ಕಾವ್ಯಗಳಿಗಿಂತ ಹೆಚ್ಚು ಸುಲಭವಾಗಿದೆ. ಇದರಲ್ಲಿ ಕವಿಯು ಚಿರು

ತೊಂಡನಂಬಿಯೆಂಬ ಭಕ್ತನ ಕಥೆ, ಗಿರಿಜಾ ಕಲ್ಯಾಣದ ಕಥೆ, ಶಿವನ ದಾರುಕಾವನ ವಿಹಾರ, ಹಾಲಾಹಲ ಭಕ್ಷಣ ಮತ್ತು ಇಂದ್ರಕೀಲ ವೃತ್ತಾಂತ ಎಂಬ ಐದು ಶಿವಕಥೆಗಳನ್ನು ಬರೆದಿದ್ದಾನೆ. ಇದು ಶ್ರೀನಾಥನ ಸ್ವತಂತ್ರ ಕೃತಿಯಾದರೂ ಕಾಳಿದಾಸ, ಭಾರವಿ ಮುಂತಾದ ಕವಿಗಳಿಂದ ಹಲವು ಕಲ್ಪನೆಗಳನ್ನು ತೆಗೆದುಕೊಂಡಿರುವುದು ವ್ಯಕ್ತವಾಗಿದೆ. ಈ ಕೃತಿಯಲ್ಲಿ ಬಹಳ ಸ್ವಾರಸ್ಯವಾದ ಭಾಗವೆಂದರೆ ಚಿರುತೊಂಡ ನಂಬಿಯ ಕಥೆ. ಇದಕ್ಕೆ ಪಾಲ್ಕುರಿಕೆ ಸೋಮನಾಥನು ಬರೆದಿರುವ ಬಸವಪುರಾಣದಲ್ಲಿ ಬರುವ ಸಿರಿಯಾಳ ವೃತ್ತಾಂತವೇ ಮೂಲಾಧಾರ. ಆದರೆ ಶ್ರೀನಾಥನು ತನ್ನ ಅಭಿರುಚಿಗನುಗುಣವಾಗಿ ಅದಕ್ಕೆ ಹಲವು ಸಂಗತಿಗಳನ್ನು ಸೇರಿಸಿ ಅದನ್ನು ಬಹಳ ರಸವತ್ತಾಗಿಸಿದ್ದಾನೆ.

ಕಂಚೀನಗರದಲ್ಲಿ ವಾಸವಾಗಿದ್ದ ಚಿರುತೊಂಡ ನಂಬಿ ಬಹಳ ನಿಷ್ಠೆಯ ಶಿವಭಕ್ತನಾದ ವರ್ತಕ. ಯಾವವೇಳೆಯಲ್ಲಿ ಜಂಗಮರು ಏನನ್ನು ಕೇಳಿದರೂ ಇಲ್ಲವೆನ್ನದೆ ನಿರ್ವಂಚನೆಯಾಗಿ ಕೊಡುವುದು ಅವನ ವ್ರತ. ಒಂದು ದಿನ ಶಿವನು ಇವನ ನಿಷ್ಠೆಯನ್ನು ಪರೀಕ್ಷಿಸಲು ಒಬ್ಬ ಜಂಗಮನ ರೂಪದಲ್ಲಿ ಬಂದು ತನಗೆ ನರಮಾಂಸ ಬೇಕೆಂದು ಬಯಸಲು ತನ್ನನ್ನೇ ಕೊಡಲು ಸಿದ್ಧನಾದನು. ಆದರೆ ಆ ಜಂಗಮನು ಅದಕ್ಕೊಪ್ಪದೆ ತಂದೆ ತಾಯಿಗಳುಳ್ಳ ಮಗನ ಮಾಂಸವೇ ಬೇಕೆಂದು ಬೇಡಲು ನಂಬಿ ಕೊಂಚವೂ ಹಿಂದೆಗೆಯದೆ ತನ್ನ ಮಗ ಸಿರಿಯಾಳನನ್ನು ಕೊಂದು ಅವನ ಮಾಂಸವನ್ನು ಅಡಿಗೆ ಮಾಡಿ ಬಡಿಸಿದನು. ಆಗ ತಂದೆತಾಯಿಗಳೂ ತನ್ನ ಜತೆಯಲ್ಲಿ ಊಟಕ್ಕೆ ಕುಳಿತು ಕೊಳ್ಳಬೇಕೆಂದು ಹಟಮಾಡಿದ ಜಂಗಮನ ಮಾತಿಗೆ ಆ ದಂಪತಿಗಳು ಒಪ್ಪಿದರು. ಆಗ ಶಿವನು ಅಂತರಂಗದಲ್ಲಿ ಸಂತುಷ್ಟನಾದರೂ ಕೊನೆಯ ಪರೀಕ್ಷೆ ಮಾಡಿದನು.

ಮಕ್ಕಳಿಲ್ಲದ ಮನೆಯಲ್ಲಿ ತಾನು ಊಟಮಾಡಲಾರನೆಂದ ಆ ಜಂಗಮ! "ಸ್ವಾಮಿ, ಇದ್ದ ಒಬ್ಬ ಮಗನನ್ನು ಅಡಿಗೆ ಮಾಡಿದೆವು. ಇನ್ನು ನಮಗೆ ಬೇರೆ ಮಗನಿಲ್ಲ" ಎಂದು ಬಿನ್ನವಿಸಿಕೊಂಡರು. ಆಗ ಜಂಗಮನು "ತಾಯಿ ಕರೆದರೆ ಬರದ ಮಗನೂ ಉಂಟೆ? ಈ ತಾಯಿ ಗಟ್ಟಿಯಾಗಿ ಕರೆಯಲಿ" ಎಂದನು. ಆಗ ತಾಯಿ ತನ್ನ ಎಲ್ಲ ಸಂಕಟವನ್ನೂ ನುಂಗಿಕೊಂಡು ಬಗೆಬಗೆಯಾಗಿ ಬಣ್ಣಿಸಿ ಕರೆದಳು. ನೋಡಿದವರೆಲ್ಲರೂ ಬೆರಗಾಗುವಂತೆ ಆ ಮಗ ನಿದ್ದೆಯಿಂದೆಚ್ಚೆತ್ತವನಂತೆ ಬಂದನು! ಜತೆಯಲ್ಲಿ ಪರಶಿವನೂ ಬಂದನು! ನಂಬಿಯೂ ಅವನ ಹೆಂಡತಿಯೂ ಭಕ್ತಿಪರವಶಳಾಗಿ ಶಿವನಿಗೆ ನಮಸ್ಕಾರ ಮಾಡಿದರು. ಆಗ ನಂಬಿಯ ನಿಷ್ಠಾ ಭಕ್ತಿಗೆ ಮೆಚ್ಚಿ ಸಂತುಷ್ಟನಾದ ಪರಶಿವನು ಆ ಕುಟುಂಬದವರೆಲ್ಲ ಸಶರೀರರಾಗಿ ಕೈಲಾಸಕ್ಕೆ ಬರುವಂತೆ ಆಹ್ವಾನಿಸಿದನು. ಆದರೆ ನಂಬಿ ತನ್ನ ಬಂಧುಗಳನ್ನು ಬಿಟ್ಟು ಕೈಲಾಸಕ್ಕೆ ಬರಲೊಪ್ಪದಿರಲು ಕಂಚಿಯ ಏಳು ಮನೆಗಳ ಸಮಸ್ತ ಭಕ್ತರಿಗೂ ಆ ಸೌಭಾಗ್ಯವನ್ನು ಶಿವನು ಕರುಣಿಸಿದನು!

ಇದು ಚಿರತೊಂಡನಂಬಿ ಅಥವಾ ಸಿರಿಯಾಳನ ಕಥೆ. ಇದನ್ನು ನಮ್ಮ ಶ್ರೀನಾಥ ಕವಿ ಬಹಳ ಚೆನ್ನಾಗಿ ಶೃಂಗರಿಸಿದ್ದಾನೆ. ಮೊದಲು ಈ ಚಿರತೊಡನಂಬಿಯ ಅವತಾರ ಕಥೆಯನ್ನು ಹೇಳಿದ್ದಾನೆ. ಇದು ಶ್ರೀನಾಥನ ಸ್ವಂತ ಕಲ್ಪನೆಯೆಂದೇ ತೋರುತ್ತದೆ. ದೂರ್ವಾಸ ಮಹರ್ಷಿಯು ಬದರಿಕಾಶ್ರಮದಲ್ಲಿ ಮಹಾ ಶಾಂತ ಮನಸ್ಕನಾಗಿ ತಪಸ್ಸು ಮಾಡುತ್ತಿದ್ದನಂತೆ. ಒಂದು ದಿನ ಮಧ್ಯಾಹ್ನ ಆ ಮುನಿ ವೈಶ್ವದೇವ ಬಲಿಹರಣಾನಂತರ ಉಳಿದಿದ್ದ ನೀವಾರ ಪಾಯಸಾನ್ನವನ್ನು ತನ್ನ ಆಶ್ರಮದ ಜಿಂಕೆಯ ಮರಿಗಳಿಗೆ ಪ್ರೀತಿ ಯಿಂದ ತಿನ್ನಿಸುತ್ತಿದ್ದುದನ್ನು ಅಂತರಿಕ್ಷದಲ್ಲಿ ವಿಮಾನದಲ್ಲಿ ಹೋಗು

ತ್ತಿದ್ದ ತುಂಬುರನೆಂಬ ಪ್ರಮಥನೊಬ್ಬನು ಕಂಡು ಈ ಮಹಾ ಮುನಿಯ ಅಪೂರ್ವವಾದ ವಾತ್ಸಲ್ಯಕ್ಕೆ ಬಹಳ ಆಶ್ಚರ್ಯಪಟ್ಟು ಪಕ್ಕದಲ್ಲಿದ್ದ ತನ್ನ ಹೆಂಡತಿಗೆ ತೋರಿಸಿ ಸಂಭ್ರಮದಿಂದ ಚಿಟಿಕೆ ಹಾಕಿದನು. ಆ ಚಿಟಿಕೆಯ ಸದ್ದು ಆ ಜಿಂಕೆಯ ಮರಿಯನ್ನು ಅಂಜಿಕೆಗೀಡುಮಾಡಿತು. ಅದು ಋಷಿಯು ನೀಡುತ್ತಿದ್ದ ಪಾಯ ಸಾನ್ನವನ್ನು ಅಲ್ಲಿಯೇ ಬಿಟ್ಟು ಓಡಿಹೋಯಿತು. ಇದು ಮುನಿಯ ಕೋಪವನ್ನು ಕೆರಳಿಸಿತು. ಅವನು ಅಂತರಿಕ್ಷದಲ್ಲಿದ್ದ ತುಂಬುರ ನನ್ನು ದಿಟ್ಟಿಸಿ 'ಎಲವೋ ದುರಾಚಾರಾ, ಇಂಥಾ ಅಪಚಾರವನ್ನು ನಾನು ಸೈರಿಸೆನು. ಇದಕ್ಕೆ ಪ್ರಾಯಶ್ಚಿತ್ತವಾಗಿ ನೀನು ಮರ್ತ್ಯ ಲೋಕದಲ್ಲಿ ಹುಟ್ಟು' ಎಂದು ಶಪಿಸಿದನು. ತುಂಬುರನು ಆರ್ತನಾಗಿ ಬಂದು ಬೇಡಿಕೊಳ್ಳಲು ಶಿವಭಕ್ತನ ಮನೆಯಲ್ಲಿ ಹುಟ್ಟುವಂತೆ ಋಷಿಯ ಅನುಗ್ರಹವಾಯಿತು. ಆ ತುಂಬುರನ ಮಾನವ ಅವತಾರವೇ ಚಿರುತೊಂಡನಂಬಿ.

ಇಲ್ಲಿ ಶ್ರೀನಾಥಕವಿ ದ್ರಾವಿಡದೇಶದ ಕಾಂಚೀನಗರವನ್ನು ಬಹಳ ರಮ್ಯವಾಗಿ ವರ್ಣಿಸಿದ್ದಾನೆ. "ಕಾಮಾಕ್ಷೀ ಕೌತುಕಾಗಾರ"ವೂ "ಏಕಮ್ರನಾಥದೇವ ದಿವ್ಯಾವಸಥ"ವೂ ಆದ ಆ ಕಾಂಚೀನಗರ ದಲ್ಲಿ ಮಹಾ ಶಿವಭಕ್ತನಾದ ಒಬ್ಬ ವೈಶ್ಯನ ಮಗನಾಗಿ ಹುಟ್ಟಿ ಚಿರುತೊಂಡನೆಂಬ ಹೆಸರಿನಿಂದ ಪ್ರಸಿದ್ಧನಾಗಿ ಶಿವಪೂಜೆ ಜಂಗ ಮಾರ್ಚನೆಗಳನ್ನು ಮಾಡುತ್ತ ಶಾಪವಿಮೋಚನೆಯ ಕಾಲವನ್ನು ನಿರೀಕ್ಷಿಸುತ್ತಿದ್ದನು. ತುಂಬುರನ ಹೆಂಡತಿ ಮಾನವ ಸ್ತ್ರೀಯಾಗಿ ಹುಟ್ಟಿ ತಿರುವೆಂಗನಾಚಿಯೆಂಬ ಹೆಸರಿನಿಂದ ಚಿರುತೊಂಡನಂಬಿಯ ಸತಿಯಾಗಿ ಅವನ ಷಟ್ಕಾಲ ಲಿಂಗಾರ್ಚನೆಗೆ ನೆರವಾಗಿ ಆದರ್ಶ ಸತಿಯೆನಿಸಿದಳು. ಯಾವ ಕಾಲದಲ್ಲಿ ಜಂಗಮರು ಏನು ಬೇಡಿದರೂ ವಂಚನೆಯಿಲ್ಲದೆ ಕೊಡುವ ವ್ರತ ಚಿರುತೊಂಡನಂಬಿ

ಯದು. ಇಂಥಾ 'ಶುದ್ಧವೀರಶೈವಾಚಾರ ಪರಾಯಣ'ನಾದ ನಂಬಿಯ ಮನೆಗೆ ಒಂದು ದಿನ ಸುಖಿ ಜಂಗಮನೊಬ್ಬನು ಬಂದು,

ಕಂಚಿನಗರಿ ಪಾಟಿಗಟ್ಟು ತೂಮುನ ದೂಮೆ
ಡಿಕ್ಷುರಸಮು ಮಾಕುನಿಪುಡು ತೆಮ್ಮು
ಹರುನಿ ನೇಡು ಮಾಕು ನಭಿಷಿಕ್ತುನೊನರಿಂಪ
ವಲಯು ನಿತ್ಯಮೈನ ವ್ರತಮು ಗಾಗ—ಎಂದು
ಕೇಳಿದನು

[ಕಂಚೀನಗರದ ಕಟ್ಟುಪಾಟು ಕೊಳಗದ ಅಳತೆಯಲ್ಲಿ ಒಂದು ಕೊಳಗದಷ್ಟು ಕಬ್ಬಿನ ರಸವನ್ನು ನನಗೆ ಈಗಲೇ ತಂದುಕೊಡು. ನಾನು ಶಿವನಿಗೆ ಅದರಿಂದ ಅಭಿಷೇಕ ಮಾಡಬೇಕು. ಅದು ನನ್ನ ನಿತ್ಯವ್ರತ.] ಬಹುಶಃ ಕಂಚೀನಗರದ ಕೊಳಗ ಬಹಳ ದೊಡ್ಡ ಕೊಳಗವಿರಬಹುದು! ಚಿರುತೊಂಡನಂಬಿ ಜಂಗಮನ ಈ ಪ್ರಾರ್ಥನೆಯನ್ನು ನಡೆಸಲು ಸಿದ್ಧನಾಗಿ ಹಣದ ಚೀಲವನ್ನು ತೆಗೆದುಕೊಂಡು ಹೊರಟು ಉತ್ತಮವಾದ ಕಬ್ಬಿನ ತೋಟಕ್ಕೆ ಹೋಗಿ ರೈತನು ಬೇಡಿದಷ್ಟು ಹಣ ಕೊಟ್ಟು ಕಬ್ಬಿನ ಜಲ್ಲೆಗಳನ್ನು ಕೊಂಡನು. ಶಿವಾರ್ಚನೆಗೆ, ಜಂಗಮ ಸೇವೆಗೆ, ಬಳಸುವ ಪದಾರ್ಥವನ್ನು ಕೊಳ್ಳಲು ಚೌಕಾಶಿ ಮಾಡುವುದು ಮಹಾ ಪಾತಕ! ಕೊಳಗ ರಸ ಬರಲು ನೂರು ಜಲ್ಲೆಗಳಾದರೂ ಬೇಕೆಂದು ತಿಳಿದು ನಂಬಿ ಅಷ್ಟನ್ನುಕೊಂಡು ಬಲವಾದ ಹೊರೆ ಕಟ್ಟಿದನು. ಬಲವಾದ ಬಳ್ಳಿಗಳನ್ನು ತಂದು ನೂರು ಜಲ್ಲೆಗಳನ್ನು ಭದ್ರವಾಗಿ ಬಿಗಿದು ಹೊರೆಕಟ್ಟಲು ಅದು ಎತ್ತಲಾರದಷ್ಟು ಹೊರೆಯಾಯಿತು! ನಂಬಿ ಅದನ್ನು ಎತ್ತಿಕೊಳ್ಳಲಾರದೆ ಹೋದನು. ಆಗ ಶಿವನು ವೇಷಾಂತರದಿಂದ ಬಂದು ಆ ಭಾರವಾದ ಹೊರೆಯನ್ನು ಎತ್ತಿ ನಂಬಿಯ ತಲೆಯ ಮೇಲೆ ಹೊರಿಸಿದನು. ಹೀಗೆ ದೊಡ್ಡ

ಭಾರವನ್ನು ಎತ್ತಿದ್ದರಿಂದ ನಂಬಿಯೂ ಶಿವನೂ ಬಹಳವಾಗಿ ಆಯಾಸಪಟ್ಟು ಮೈ ಬೆವತುಬಿಟ್ಟರಂತೆ! ಚಿರುತೊಂಡನಂಬಿ ಆ ಹೊರೆಯನ್ನು ಹೇಗೋ ಹೊತ್ತುಕೊಂಡು ಮನೆಗೆ ಹೋದನು.

ಇತ್ತ ವೇಷಧಾರಿಯಾದ ಶಿವನು ಮೈ ಬೆವತುದು ಪ್ರಮಾದ ಕ್ಕಿಟ್ಟುಕೊಂಡಿತು. ಶಿವನು ಆಗ ಕೈಲಾಸದಲ್ಲಿ ಅಪ್ಸರ ಸ್ತ್ರೀಯರ ನಾಟ್ಯವನ್ನು ಪಾರ್ವತೀ ಸಮೇತನಾಗಿ ಕುಳಿತು ನೋಡುತ್ತಿದ್ದನು. ಅಂಥಾ ಸಮಯದಲ್ಲಿ ಶಿವನ ಮೈ ಬೆವತುದನ್ನು ಕಂಡು ಪಾರ್ವತಿಯ ಮನಸ್ಸಿನಲ್ಲಿ ವಿಶೇಷವಾದ ಅಸೂಯೆಯುಂಟಾ ಯಿತು! ತನ್ನ ಇನಿಯನು ಯಾವಳೋ ಅಪ್ಸರೆಯ ಮೇಲೆ ಆಸೆಪಟ್ಟನೆಂದು ಭಾವಿಸಿದಳು. ಅವಳಿಗೆ ಮಹಾ ಕೋಪ ಬಂತು. ಆ ಕೂಡಲೆ ಪಾರ್ವತಿಯು ತನ್ನ ಕೈಲಿದ್ದ ಒಂದು ಕಮಲ ಪುಷ್ಪವನ್ನು ಎತ್ತಿ ಶಿವನ ತಲೆಯ ಮೇಲೆ ಕುಕ್ಕಿದಳು. ಕುಕ್ಕಿದ ರಭಸಕ್ಕೆ ಆ ಹೂವಿನ ಪರಾಗವು ಶಿವನ ಕಣ್ಣಿನೊಳಕ್ಕೆ ಬಿದ್ದು ಕಣ್ಣೀರೇ ಸುರಿಯಿತು! ಆದರೆ ರಸಿಕ ರಾಜನಾದ ಶಿವ ಪಾರ್ವತಿಯ ಮೇಲೆ ಸಿಟ್ಟಾಗಲಿಲ್ಲ. ಹಿಮಶೈಲನಂದನೆಯ ಕೈಲಿ ಏಟು ತಿಂದ ಇಂದುಧರನು ತನ್ನ ಮೈ ಬೆವತುದಕ್ಕೆ ಸುರಸುಂದರೀ ಸಂದರ್ಶನ ದಿಂದಾದ ಕಂದರ್ಪವಿಕಾರ ಕಾರಣವಲ್ಲವೆಂಬುದನ್ನು ಸ್ಪಷ್ಟ ಪಡಿಸ ಬಯಸಿ ಗೋವಿಂದ ಶತಾನಂದ ಪುರಂದರಾದಿಗಳಾದ ಬೃಂದಾರಕರೆಲ್ಲ ಕೇಳುತ್ತಿರಲು ಹೀಗೆ ಹೇಳಿದನಂತೆ!

ಕಮಲಾಕ್ಷಿಯಿದಿ ಯೇಮಿಗಾ ದಲಂಚಿತಿ ವಿಪುಡರ್ಥದೇಹಂಬುನೀಯದಿಯು ಕಾದೆ
ಹೃದಯಂಬು ಪೊರುವುನ ಹೃದಯ ಮುಂಡುಟ ಲೇದೆ ಯೇಕೀಭವಿಂಚಿನ ಯಿರುವುರಕುನು
ನೇ ಭಾವಮೈನ ನೀಹೃದಯಂಬುನಕು ದಾಚನೇಭಂಗಿವಚ್ಚುನಾ ಹೃದಯ ಮುನಕು
ನಪರಾಧಶಂಕಯಾವಂತಯ್ಯೆನನು ಲೇದು ನೀಚಿತ್ತಮುನಕೆಕ್ಕ ನಿಕ್ಕುವಂಬು

ತಪ್ಪುಲೇಕುಂಡನೇಲನೆತ್ತಮ್ಮಿಮೊಗಡ
ವಿಸರಿ ವಕ್ಷಃಪ್ರದೇಶಂಬು ವ್ರೇಟುಗೊಂಟೆ
ಕೇಸರಂಬುಲ ರಜಮು ಬುಪ್ಪಾಸವಂಬು
ನೆಜಿಸೆ ನಿದೆ ಚೂಡು ಕನ್ನುಲ ನೀರು ಗ್ರಮ್ಮೆ

[ಕಮಲಾಕ್ಷಿ, ಇದೇನೆಂದು ಭಾವಿಸಿದೆ? ಈಗ ಅರ್ಧದೇಹ ನಿನ್ನದೇ ಅಲ್ಲವೆ? ನನ್ನ ಯಾವ ಭಾವನೆಯನ್ನೇ ಆದರೂ ನಿನ್ನ ಹೃದಯಕ್ಕೆ ತಿಳಿಯದಂತೆ ಬಚ್ಚಿಡಲು ನನ್ನ ಹೃದಯಕ್ಕೆ ಸಾಧ್ಯವೆ? ಅಪರಾಧಶಂಕೆ ಸಾಸವೆಯಷ್ಟೂ ಇಲ್ಲ. ಇಗೊ ನೀನು ಬೀಸಿ ಹೊಡೆದ ಹೂವಿನ ಪರಾಗದಿಂದ ನನ್ನ ಕಣ್ಣಲ್ಲಿ ನೀರು ಬರುತ್ತಿದೆ.] ಪರಶಿವನು ತನ್ನ ಮೈ ಬೆವರಿದ ಕಾರಣವನ್ನು ಸಾವಧಾನವಾಗಿ ವಿವರಿಸಿ ಹೇಳಿ ಚಿರುತೊಂಡನಂಬಿಯ ಅಸಾಧ್ಯವಾದ ಜಂಗಮ ಸೇವೆಯನ್ನು ಹೊಗಳಿ ಕೊನೆಗೆ

ಕಲಿಯುಗಂಬುನ ಗಳ್ಯಾಣಕಟಕನಗರಿ
ನಾಕು ಭಕ್ತುಂಡು ಬಸವರಸನಾಥುಡೊಕಡು
ಕಾಂಚಿನಗರಂಬುಲೋ ವಣಿಗ್ವಂಶವರುಡು
ನಾದು ಭಕ್ತುಂಡು ಚಿಱುತೊಂಡನಂಬಿಯೊಕಡು

ಎಂದು ಹೇಳಿದನು. (ಕಲಿಯುಗದಲ್ಲಿ ಕಲ್ಯಾಣ ನಗರದಲ್ಲಿ ಬಸವರಸನೊಬ್ಬ, ಕಾಂಚೀನಗರದ ವಣಿಗ್ವಂಶದ ಚಿರುತೊಂಡ ನಂಬಿಯೊಬ್ಬ—ಈ ಇಬ್ಬರೇ ದೊಡ್ಡ ಶಿವಭಕ್ತರು). ಶಿವನ ಈ ಪ್ರಶಂಸಾವಾಕ್ಯವನ್ನು ಕೇಳಿ ಪಾರ್ವತಿಗೆ ನಂಬಿಯನ್ನು ನೋಡುವ ಆಸೆಯಾಯಿತಂತೆ! ಆಕೆಯ ಪ್ರಾರ್ಥನೆಯನ್ನು ಮನ್ನಿಸಿ ಶಿವನು ಆಕೆಯನ್ನು ಜತೆಯಲ್ಲಿ ಕರೆದುಕೊಂಡು ಕಾಂಚೀನಗರಕ್ಕೆ ಹೊರಟನು. ಶಿವನೇ ಜಂಗಮರೂಪಿಯಾಗಿ, ಪಾರ್ವತಿ ಒಬ್ಬ ವೃದ್ಧ ಜಂಗಮ ಸ್ತ್ರೀಯಾಗಿ ವೇಷ ಧರಿಸಿ ಕಾಂಚೀನಗರದ ಹೊರವಳಯ ದಲ್ಲಿದ್ದ ಒಂದು ಪಾಳು ಮಂಟಪದಲ್ಲಿ ನಿಂತರು. ಆ ವೇಳೆಗೆ

ಕಂಚಿಯಲ್ಲಿ ಇಪ್ಪತ್ತೆರಡು ದಿನ ಏಕಪ್ರಕಾರವಾಗಿ ಕುಂಭದ್ರೋಣ ವರ್ಷ ಸುರಿದು ಅನೇಕಜನ "ಇಂಧನತೃಣ ಕ್ಲೇಶ"ಗಳನ್ನು ಸಹಿಸಲಾರದೆ ಊರುಬಿಟ್ಟು ಹೊರಟು ಹೋಗಿದ್ದರು. ಚಿರುತೊಂಡನಂಬಿ ಒಂದುದಿನ ಯಾರೂ ಜಂಗಮರು ಮನೆಗೆ ಬರದಿರಲು ತಾನೇ ಹುಡುಕಿಕೊಂಡು ಹೊರಟನು. ಜಂಗಮಾರಾಧನೆ ಮಾಡದೆ, ಪಾದೋದಕ ಪ್ರಸಾದಗಳನ್ನು ಸ್ವೀಕರಿಸದೆ, ಅವನು ಎಂದೂ ಊಟಮಾಡುತ್ತಿರಲಿಲ್ಲ. ನಿತ್ಯವೂ ಆತನ ಮನೆಯ ಮುಂದೆ ಸಾವಿರಾರು ಜನ ಜಂಗಮರು ಕಾದಿರುತ್ತಿದ್ದರು. ಆದರೆ ಅವೊತ್ತು ಮಳೆಯ ಕಾರಣದಿಂದ ಯಾರೂ ಬಂದಿರಲಿಲ್ಲ.

ಚಿರುತೊಂಡನಂಬಿ ಜಂಗಮರನ್ನು ಹುಡುಕಿಕೊಂಡು ಕಂಚಿಯನ್ನೆಲ್ಲ ಸುತ್ತಿದನು. ಆದರೆ ಯಾರೂ ಲಭಿಸಲಿಲ್ಲ. ಕಡೆಗೆ ಅವನು ಈ ವೇಷಧಾರಿ ಜಂಗಮನಿದ್ದ ಪಾಳುಗುಡಿಗೆ ಬಂದು ಅವರಿಬ್ಬರನ್ನೂ ಕಂಡು ಆನಂದಪರವಶನಾಗಿ ಅವರಿಬ್ಬರೂ ತನ್ನ ಮನೆಗೆ ಅಂದು ಊಟಕ್ಕೆ ಬರಬೇಕೆಂದು ಆಹ್ವಾನಿಸಿದನು. ಆದರೆ ಆ ಜಂಗಮನು ಮಹಾ ಕ್ರೂರವಾದ ಪ್ರಾರ್ಥನೆ ಮಾಡಿದನು. ತನಗೆ ಊಟಕ್ಕೆ ನರಮಾಂಸ ಬೇಕೆಂದೂ, ತಾಯಿ ತಂದೆಗಳು ಸ್ವಂತವಾಗಿ ತಮ್ಮ ಮಗನನ್ನು ಕೊಂದು ಆ ಮಾಂಸವನ್ನು ಅಡಿಗೆ ಮಾಡಿ ಬಡಿಸಬೇಕೆಂದೂ ಜಂಗಮನು ಹೇಳಲು ಚಿರುತೊಂಡನಂಬಿಯು ಕೊಂಚವೂ ಅಳುಕದೆ ತನ್ನ ಮಗನ ಮಾಂಸವನ್ನೇ ಬಡಿಸುವುದಾಗಿ ಹೇಳಿ ಒಪ್ಪಿಸಿ ಜಂಗಮರನ್ನು ಮನೆಗೆ ಕರೆತಂದನು. ಅವನ ಹೆಂಡತಿ ತಿರುವೆಂಗಾಚಿ, ಮಗ ಸಿರಿಯಾಳನೂ ಸಹ ಇದಕ್ಕೆ ಸಂತೋಷವಾಗಿ ಒಪ್ಪಿದರು! ಆಗ ಆ ಕಪಟ ಜಂಗಮನು ಚಿರುತೊಂಡನಂಬಿಯ ಮನೋನಿಶ್ಚಯಕ್ಕೆ ಸಂತೋಷಪಟ್ಟನಾದರೂ ಅವನ ಹೆಂಡತಿ ಮಕ್ಕಳ ಮನಸ್ಸನ್ನು ಕದಡಿಸಲು

ಬಹಳ ಪ್ರಯತ್ನ ಪಡುತ್ತಾನೆ. ಅವನು ಶಾಲೆಯಲ್ಲಿ ಹುಡುಗರೊಡನೆ ಓದುಕಲಿಯುತ್ತಿದ್ದ ಮುದ್ದು ಸಿರಿಯಾಳನಲ್ಲಿಗೆ ಹೋಗಿ :

"ಅನ್ನಾ ಈ ಚಿಱುತೊಂಡನಂಬಿಯನು ಪಾಪಾತ್ಮುಂಡು ಮೀತಂಡ್ರಿಯೆ?
ಯನ್ನಿಭಾರ್ಗ್ಯುಡು ಜೋಗಿ ಕೊಕ್ಕರುನಿಕಿನ್ ಹಾಲಾಮದೋ ನ್ಮಾದಿಕಿನ್
ನಿನ್ನುಂಜಂಪಿ ಮಹೇಶಹಾರಮುಗ ವಂಡಿಂಪಗನುನ್ನಾಡು ಸಂ
ಪನ್ನಸ್ನೇಹಮು ತೋಡ ನೀಕುನೆಱಿಗಿಂಪನ್‌ವಚ್ಚಿತಿಂಜೆಚ್ಚೆರನ್

ಎಂದು ಹೇಳಿದನು. (ಅಣ್ಣಾ ಈ ಚಿರುತೊಂಡನಂಬಿಯೆಂಬ ಪಾಪಾತ್ಮ ನಿನ್ನ ತಂದೆಯೆ? ಆ ನಿರ್ಭಾಗ್ಯನು ನಿನ್ನನ್ನು ಕೊಂದು ನಿನ್ನ ದೇಹಮಾಂಸವನ್ನು ಅಡಿಗೆ ಮಾಡಿ ಯಾವನೋ ಜೋಗಿಯೊಬ್ಬನಿಗೆ ಬಡಿಸಲು ಸಿದ್ಧನಾಗುತ್ತಿದ್ದಾನೆ. ನನಗೆ ನಿನ್ನ ಮೇಲಿರುವ ಸ್ನೇಹಾತಿಶಯದಿಂದ ನಿನ್ನನ್ನು ಎಚ್ಚರಿಸಲು ಬಂದಿದ್ದೇನೆ.) ಆದರೆ ಸಿರಿಯಾಳನ ಮುಖದಲ್ಲಿ ಇದರಿಂದ ಯಾವ ವಿಕಾರವೂ ಕಾಣಲಿಲ್ಲ. ಆದರೆ ಈ ಜೋಗಿ ಸುಮ್ಮನಾಗಲಿಲ್ಲ. ಆವನು ಆ ಹುಡುಗನಿಗೆ "ಜೀವನ್ಭದ್ರಾಣಿ ಪಶ್ಯತಿ" ಎಂಬ 'ವೇದವಚನ'ವನ್ನು ಹೇಳಿ ಅವನು ತಪ್ಪಿಸಿಕೊಂಡು ಹೋಗುವುದೇ ಕರ್ತವ್ಯವೆಂದು ಉಪದೇಶಿಸಿದನು.

ಆದರೆ ಸಿರಿಯಾಳನು ಈ ಮಾಯ ಜೋಗಿಯು ಹೇಳಿದ ಎಲ್ಲ ಮಾತುಗಳನ್ನೂ ಕೇಳಿ ಆವನಿಗೇ ಒಂದು ಪ್ರಶ್ನೆ ಹಾಕಿದನು. (ದಧೀಚಿಯು ವಿವೇಕಹೀನನೆನ್ನೋಣವೇ? ಜೀಮೂತವಾಹನ ಮತ್ತು ಶಿಬಿಚಕ್ರವರ್ತಿಗಳು ಅಲ್ಪಬುದ್ಧಿಗಳೆ? "ಪರೋಪಕಾರಾರ್ಥಮಿದಂ ಶರೀರಂ" ಎಂಬ ವಾಕ್ಯವನ್ನು ನೀನು ಕೇಳಲಿಲ್ಲವೇ? ಮುನಿಶ್ರೇಷ್ಠ?)

ಎಱುಕ ಚಾಲನಿವಾಡಂದುಮೋ ದಧೀಚಿ
ನಲ್ಪಬುದ್ಧುಲೆ ಮೇಘವಾಹನುಡು ಶಿಬಿಯು

ದರ'ಬರೋಪಕಾರ್ಥಮಿದಂ ಶರೀರ'
ಮನೆಡು ವಾಕ್ಯಂಬು ವಿನವೆ ಸಂಯಮಿವರೇಣ್ಯ

ಈ ಪ್ರಶ್ನೆಗೆ ಸಮರ್ಪಕವಾದ ಉತ್ತರಕೊಡಲಾರದೆ ಆ ಜೋಗಿ ಸುಮ್ಮನಾಗಬೇಕಾಯಿತು. ಇತ್ತ ಪಾರ್ವತೀ ದೇವಿಯು ಒಬ್ಬ ಎಳೆಯ ಬಾಣಂತಿಯ ವೇಷ ಧರಿಸಿ ಹಸು ಮಗುವನ್ನೆತ್ತಿಕೊಂಡು ನಂಬಿಯ ಮನೆಗೆ ಬಂದು ತಿರುವೆಂಗನಾಚಿಯನ್ನು ಪ್ರಾರ್ಥಿಸಿ ಕೊಂಚ ಹಾಲು ತೆಗೆದುಕೊಂಡು ಆಕೆಯ ಇದಿರಿನಲ್ಲಿಯೇ ತನ್ನ ಮಗುವಿಗೆ ಕುಡಿಸಿ ಆಕೆಯ ಪುತ್ರವಾತ್ಸಲ್ಯವನ್ನು ಬಡಿದೆಬ್ಬಿಸುವ ಪ್ರಯತ್ನಮಾಡಿ

"ಪ್ರಜಲೆಲ್ಲಂ ಬುರಿ ಗ್ರುಂತಕ್ರುಂತಲ ಮಹಾಪಾಪಂಬುಗಾ ಬಲ್ಕೆಡುನ್
ನಿಜಮೋ ಕಲ್ಲಯೊ ಕಾನಿ ಮೀರಟ ಕಡು ನಿಸ್ತ್ರಿಂಶ ಭಾವಂಬುನನ್
ನಿಜಪುತ್ರುನ್ನುಕುಮಾರು ಜಂಪ ಯೊಕ ದುರ್ನಿರ್ವಾಣಿಕಿ ಜೋಗಿಕಿ
ನ್ಭುಜಿಯಿಂಪಂಗನೊನರ್ಚುವಾರಟದಿಯೆಂದುಂಗಲ್ಗು ನೇಯಿದ್ಧರನ್

ಎಂದಳು. (ಅಮ್ಮಾ ಊರಲ್ಲಿ ಪ್ರಜೆಗಳೆಲ್ಲ ಒಂದು ಮಹಾ ಪಾಪದ ಸುದ್ದಿಯನ್ನು ಮಾತನಾಡಿಕೊಳ್ಳುತ್ತಿದ್ದಾರೆ. ಅದು ನಿಜವೋ ಸುಳ್ಳೋ ತಿಳಿಯದು. ನೀವು ಯಾವ ದುಃಖವೂ ಇಲ್ಲದೆ ನಿಮ್ಮ ಒಬ್ಬನೇ ಮಗನನ್ನು ಕೊಂದು ಯಾರೋ ಒಬ್ಬ ಜೋಗಿಗೆ ಊಟಕ್ಕೆ ಬಡಿಸುವಿರಂತೆ. ಹೌದೆ? ಇಂಥಾ ಅಡಿಗೆ ಮಾಡುವವರು. ಭುಜಿಸುವವರು, ಈ ಪ್ರಪಂಚದಲ್ಲಿ ಇರುತ್ತಾರೆಯೇ?) ಅಷ್ಟಕ್ಕೆ ನಿಲ್ಲದೆ ಆಕೆಯು ಶಿವಾಚಾರ ಪದ್ಧತಿಯನ್ನೇ ಕುರಿತು ಹೀಗೆ ಟೀಕೆಮಾಡಿದಳಂತೆ!

ಆವಗಿಂಜಂತ ಭೂತಿ ಮೈನಲಮಿಕೊನಿನ
ವೆಲದಿ ಗುಮ್ಮಡಿಕಾಯಂತ ವೆರ್ರಿ ಪುಟ್ಟು
ಗಟಕಟಾ ಯೆಟ್ಲು ತನ ಬುದ್ಧಿಕಾಟಗಲಿಯು
ಸಿಸುವು ಜಂಪಂಗದಲೆಚಿನೋ ನೀ ಮಗಂಡು

(ಸಾಸವೆ ಕಾಳಿನಷ್ಟು ವಿಭೂತಿಯನ್ನು ಮೈಗೆ ಹಚ್ಚಿಕೊಂಡರೆ ಕುಂಬಳಕಾಯಿನಷ್ಟು ಹುಚ್ಚು ಹುಟ್ಟುತ್ತದೆ. ಅಯ್ಯೋ! ನಿನ್ನ ಗಂಡನು ಹೇಗೆ ತಾನೆ ನಿನ್ನ ಶಿಶುವನ್ನು ಕೊಲ್ಲಲು ನಿರ್ಧರಿಸಿದನೊ? ಅವನ ಬುದ್ಧಿ ಯಾವ ಶ್ಮಶಾನಕ್ಕೆ ಹೋಯಿತೋ!)

ಆದರೆ ತಿರುವೆಂಗನಾಚಿಯು ಕೊಂಚವೂ ಚಿತ್ತ ವಿಕಾರವನ್ನು ಹೊಂದದೆ "ಅಮ್ಮಾ ಶಿವನಿಗೂ ಶಿವಯೋಗಿಗೂ ಭೇದವಿಲ್ಲ. ಭಕ್ತರ ಪ್ರಾಣಗಳು ಶಿವಾಧೀನ. ಶಿವನೇ ಕರ್ತ, ಶಿವನೇ ಭೋಕ್ತ. ಇದಕ್ಕೆ ಚಿಂತಿಸುವುದು ಅನವಸರ. ನಿನ್ನ ಮಗುವಿಗೆ ಹಾಲು ಸಾಕೆ? ನಿನಗೂ ಹೊತ್ತಾಗಿರಬಹುದು. ನಾನಿನ್ನು ಅಡಿಗೆಯ ಕೆಲಸಕ್ಕೆ ಹೋಗಬೇಕು" ಎಂದು ಹೇಳಲು, ಪಾರ್ವತಿಯು ಇನ್ನೇನೂ ಮಾಡಲು ಸಾಧ್ಯವಿಲ್ಲವೆಂದು ಬಗೆದು ಅಲ್ಲಿಂದ ಹೊರಟುಬಿಟ್ಟಳು!

ಶಿವಪಾರ್ವತಿಯರು ನಾನಾ ರೀತಿಯಲ್ಲಿ ಪರೀಕ್ಷಿಸಿದರೂ ಅವರ ಭಕ್ತಿಯಲ್ಲಿ ಏನೂ ಕೊರತೆ ಕಾಣಲಿಲ್ಲ. ಕಡೆಗೆ ಶಿವನು ತನ್ನ ನಿಜಸ್ವರೂಪವನ್ನು ತೋರಿ ಚಿರುತೊಂಡನಂಬಿ ಮತ್ತು ಹೆಂಡತಿ ಮಕ್ಕಳಿಗೇ ಅಲ್ಲದೆ ಕಂಚೀನಗರದ ಏಳು ಮನೆತನಗಳವರಿಗೆಲ್ಲ ಸಶರೀರರಾಗಿ ಕೈಲಾಸಕ್ಕೆ ಹೋಗುವ ಸೌಭಾಗ್ಯವನ್ನು ಅನುಗ್ರಹಿಸಿದನಂತೆ. ಹೀಗೆ ಶ್ರೀನಾಥನು ಎಂಥ ಕ್ರೂರವಾದ ಸನ್ನಿವೇಶಗಳನ್ನುಳ್ಳ ಕಥೆಯನ್ನೂ ಬಹಳ ರಸವತ್ತಾದ ರೀತಿಯಲ್ಲಿ, ಚಿತ್ತಾಹ್ಲಾದಕರವಾದ ಶೈಲಿಯಲ್ಲಿ ಹೇಳಬಲ್ಲವನಾಗಿದ್ದಾನೆ. ಮುಂದೆ ಗೌರೀಕಲ್ಯಾಣದ ಕಥೆಯನ್ನೂ ಇಂದ್ರಕೀಲ ವೃತ್ತಾಂತ ವನ್ನೂ ಶ್ರೀನಾಥನು ವಿಸ್ತಾರವಾಗಿ ವರ್ಣಿಸಿದ್ದಾನೆ.

## ಭೀಮಖಂಡಮು

ಭೀಮೇಶ್ವರ ಸ್ವಾಮಿಯ ಮಹಿಮಾತಿಶಯವನ್ನು ಹೊಗಳಿ ಭೀಮೇಶ್ವರ ಕ್ಷೇತ್ರದ ಹಿರಿಮೆಯನ್ನು ವರ್ಣಿಸುವುದೇ ಈ ಕಾವ್ಯ

ದಲ್ಲಿ ಶ್ರೀನಾಥ ಕವಿಯ ಉದ್ದೇಶ. ದಕ್ಷಾರಾಮದಲ್ಲಿ ನೆಲಸಿರುವ ಭೀಮೇಶ್ವರನೇ ಈ ಕಾವ್ಯದ ನಾಯಕ. ಆತನು ನೆಲಸಿದ ದಕ್ಷಾರಾಮವು ದಕ್ಷಿಣ ಕಾಶಿಯೆಂದು ಆಂಧ್ರ ದೇಶದಲ್ಲಿ ಮಾನ್ಯ ವಾಗಿದೆ. ನಮ್ಮ ಶ್ರೀನಾಥನು ಈ ಕ್ಷೇತ್ರವು ಕಾಶೀ ಕ್ಷೇತ್ರಕ್ಕಿಂತಲೂ ಶ್ರೇಷ್ಠವೆಂದೇ ಒಂದೆಡೆ ವರ್ಣಿಸಿದ್ದಾನೆ.

> ಕಾಶಿಂ ಜಚ್ಚಿನಯಂತ ಗಾನಿ ಪಡಯಂಗಾರಾನಿ ಕೈವಲ್ಯಮು
> ಕ್ಲೇಶಂಬೌನಟು ವೈದ್ಯ ನಾಯಕುನಿಚೇ ಲೀಲಾಗತಿಂ ಜೇರುರಾ
> ರೋ! ಶೀಘ್ರಂಬುನ ಮರ್ತ್ಯುಲಾರ! ಯನುನಾ
> ರೂಪಂಬನನ್ ಮ್ರೋಯುನಾ
> ಕಾಶಾಸ್ಫಾಲನ ಗೌತಮೀಜಲಧಿ ಸಂಗಕ್ಲೇಶ ಕಲ್ಲೋಲ ಮುಲ್

(ಕಾಶಿಯಲ್ಲಿ ಸತ್ತ ಹೊರತು ಪಡೆಯಲಾಗದ ಕೈವಲ್ಯವು ಯಾವ ಕ್ಲೇಶವೂ ಇಲ್ಲದೆ ಇಲ್ಲಿ ಲಭಿಸುತ್ತದೆ. ಮರ್ತ್ಯರೇ, ಬೇಗನೆ ಬಂದು ಸೇರಿರಿ! ಎಂದು ಲೋಕಕ್ಕೆ ಹೇಳುವ ರೀತಿಯಲ್ಲಿ ಇಲ್ಲಿ ಗೌತಮೀ ನದಿಯ ನೀರು ಸಮುದ್ರವನ್ನು ಸೇರುವಾಗ ಹುಟ್ಟುವ ಅಲೆಗಳ ಗರ್ಜನೆ ಘೋಷಿಸುತ್ತಿದೆ.)

ಕಾಶಿಯಲ್ಲಿ ಸತ್ತರೆ ಕೈಲಾಸ ಸಿದ್ಧಿಸುವುದೆಂದು ಆಸ್ತಿಕರ ನಂಬಿಕೆ. ಆದ್ದರಿಂದಲೇ ಅನೇಕರು ಊರು ಕೇರಿಗಳನ್ನು ಬಿಟ್ಟು ಕಾಶಿಗೆ ಹೋಗಿ ಅಲ್ಲಿ ಮರಣವನ್ನು ಪ್ರತೀಕ್ಷಿಸುತ್ತ 'ಕಾಶೀವಾಸಿ' ಗಳಾಗಿರುತ್ತಾರೆ. ದಕ್ಷಾರಾಮ ಭೀಮೇಶ್ವರನ ಸನ್ನಿಧಿಯಲ್ಲಿ ಈ ಕ್ಲೇಶವಿಲ್ಲ. ಗೋದಾವರೀ ಸ್ನಾನಮಾಡಿ ಭೀಮೇಶ್ವರ ಸ್ವಾಮಿಯ ಸಂದರ್ಶನ ಮಾಡಿದರೆ ಸಾಕು, ಕೈವಲ್ಯ ಕಟ್ಟಿಟ್ಟ ಬುತ್ತಿ! ಆದ್ದರಿಂದ ಉತ್ತರದ ಆ ಕಾಶಿಗಿಂತ ದಕ್ಷಿಣದ ಈ ಕ್ಷೇತ್ರವೇ ಶ್ರೇಷ್ಠವಾಯಿತು.

ಈ ಕ್ಷೇತ್ರಕ್ಕೆ ದಕ್ಷಾರಾಮವೆಂದು ಹೆಸರು ಬರಲು ಕಾರಣವನ್ನು ಶ್ರೀನಾಥ ಹೀಗೆ ಹೇಳಿದ್ದಾನೆ:

ದಕ್ಷುನಿ ಸವನಾಗಾರಮು
ದಕ್ಷಾರಾಮಂಬು ಶಿವುಡು ತನ್ಮಧ್ಯಮುನನ್
ಸಾಕ್ಷಾತ್ಕರಿಂಚಿಯುಂಡುಟ
ಮೋಕ್ಷಮು ಭೋಗಂಬು ಬ್ರಾಲೆ ಮುಜ್ಜಗಮುಲಕುನ್

(ದಕ್ಷನ ಯಜ್ಞಶಾಲೆ ಇದ್ದ ಸ್ಥಳವಾದ್ದರಿಂದ ಇದು ದಕ್ಷಾರಾಮ. ಅದರ ಮಧ್ಯದಲ್ಲಿ ಶಿವನು ಸಾಕ್ಷಾತ್ಕಾರವಾಗಿರುವುದರಿಂದ ಇದು ಮೂರು ಲೋಕಗಳಿಗೂ ಭೋಗ ಮೋಕ್ಷಗಳನ್ನು ಕೊಡಬಲ್ಲುದು.) ಶಿವನಿಗೆ ಆಹ್ವಾನವಿಲ್ಲದ ಕಾರಣದಿಂದ ದಕ್ಷನು ಕೈಕೊಂಡ ಯಜ್ಞವು ಧ್ವಂಸವಾಯಿತು. ಈಗ ದಕ್ಷಾರಾಮದಲ್ಲಿ ಶಿವನು ಭೀಮೇಶ್ವರನೆಂಬ ಹೆಸರಿನಿಂದ ಬಂದು ನೆಲಸಿದ್ದಾನೆ. ಇಂಥಾ ಶಿವನ ದರ್ಶನದಿಂದ ಎಲ್ಲರಿಗೂ ಇಹ ಪರಸಾಧನೆಯಾಗುತ್ತದೆ. ಈ ಕ್ಷೇತ್ರದ ಮಹತ್ವವನ್ನು ಎಷ್ಟು ಹೊಗಳಿದರೂ ಶ್ರೀನಾಥನಿಗೆ ತೃಪ್ತಿಯಿಲ್ಲ.

ಭೀಮನಾಥೇಶ್ವರುನಿಕನ್ನ ಬೆದ್ದವೇಲ್ಪು
ದಕ್ಷವಾಟಂಬುಕಂಟೆ ನುತ್ತಮ ಪದಂಬು
ಸಪ್ತಗೋದಾವರಮುಕಂಟೆ ಸಕಲ ತೀರ್ಥ
ಸಾರಮಗು ತೀರ್ಥರಾಜಂಬು ಜಗತಿ ಲೇದು.

[ಭೀಮನಾಥನಿಗಿಂತ ದೊಡ್ಡ ದೇವರು, ದಕ್ಷವಾಟಿಗಿಂತ ಉತ್ತಮ ಸ್ಥಳ, ಸಪ್ತ ಗೋದಾವರಿಗಿಂತ ಶ್ರೇಷ್ಠವಾದ ತೀರ್ಥವೂ ಜಗತ್ತಿನಲ್ಲಿಲ್ಲ]

ಈ ಕ್ಷೇತ್ರದಲ್ಲಿ ಎಲ್ಲ ಕಾಲಗಳಲ್ಲಿಯೂ ಇರುವೆನೆಂದು ಶಿವನೇ ಹೇಳಿದ್ದಾನೆ :

ಎಲ್ಲ ಕಾಲಂಬು ನುಂಡೆದ ನಿಚಟ ನೇನು
ಮೊದಲಿ ಮಾ ಮಾಮ ಯಾರಾಮ ಪದಮುನಂದು
ವೆಂಡಿಗುಬ್ಬಲಿಪ್ಪೈ ವೇಡ್ಕವೀಡುಕೊಲಿಪಿ
ಮೇರುನಗರಾಜುಪ್ಪೈ ಜಾಲ ಮೆಚ್ಚು ವದಲಿ

(ಬೆಳ್ಳಿಯ ಬೆಟ್ಟದ ಮಮತೆಯನ್ನು ಬೀಳ್ಕೊಟ್ಟು, ಮೇರು ಪರ್ವತದ ಮೇಲಿನ ಹೆಚ್ಚಾದ ಮೆಚ್ಚಿಗೆಯನ್ನೂ ಬಿಟ್ಟು ನನ್ನ ಮೊದಲನೆಯ ಮಾವನ (ದಕ್ಷಬ್ರಹ್ಮ) ಈ ಆರಾಮಸ್ಥಳದಲ್ಲಿ ನಾನು ಎಲ್ಲ ಕಾಲವೂ ನೆಲಸಿರುತ್ತೇನೆ) ಋಷಿಗಳ ಪ್ರಾರ್ಥನೆಯನ್ನು ಮನ್ನಿಸಿ ಶಿವನು ಇಲ್ಲಿ ಶಾಶ್ವತವಾಗಿ ನೆಲೆಸಿದ್ದಾನೆಂದು ಸ್ಥಳಪುರಾಣ.

ಅಗಸ್ತ್ಯಮಹರ್ಷಿಯು ವ್ಯಾಸನಿಗೆ ದಕ್ಷಾರಾಮದ ಪರಿಚಯ ಮಾಡಿಕೊಡುತ್ತ ಹೀಗೆ ನುಡಿದಿದ್ದಾನೆ:

ದಕ್ಷಪ್ರಜಾಪತಿ ಮಹಾಧ್ವರ ಕ್ರಿಯಾ
ದೀಕ್ಷಾಧಿಗಮು ಪುಣ್ಯದೇಶಮುನಕು
ಬ್ರಹ್ಮ ವಿಷ್ಣು ಪುರಂದರ ಪ್ರಧಾನ ಸುಪರ್ವ
ಪರಮ ಸಂಯಮಿ ಸಭಾಭವನಮುನಕು

ದಾಕ್ಷಾಯಣೀ ಯೋಗದಹನಾರ್ಚಿರುನ್ಮೇಷ
ಸಾಮಿಧೇನೀ ಮಂತ್ರಜಾತ ಮುನಕು
ವೀರಭದ್ರ ಭುಜಾವಿಹಾರ ಹೇಲಾ ಸಮಾ
ರಂಭನಾಟಕ ನಾಟ್ಯರಂಗ ಮುನಕು

ನಮೃತಮಯ ದಿವ್ಯತೇಜಸ್ಸ್ವಯಂಭುಲಿಂಗ
ಶಾಂತ ಭೀಮೇಶ್ವರೇಶ್ವರ ಸ್ಥಾನಮುನಕು
ದಕ್ಷವಾಟಂಬುನಕು ಮೋಕ್ಷಧಾಮಮುನಕು
ಭೋಗ ಜನ್ಮಸ್ಥಳ ಮುನಕೇ ಪುರಮು ಸರಿಯೆ?

(ದಕ್ಷಬ್ರಹ್ಮನು ಮಹಾಯಜ್ಞ ದೀಕ್ಷೆವಹಿಸಿದ ಈ ಪುಣ್ಯದೇಶಕ್ಕೆ ಯಾವ ಪಟ್ಟಣ ಸರಿಯಾದೀತು? ದಾಕ್ಷಾಯಣೀದೇವಿ ಯಜ್ಞ ಕುಂಡವನ್ನು ಹೊಕ್ಕದ್ದು ಇಲ್ಲಿ. ವೀರ ಭದ್ರನ ಭುಜವಿಹಾರ ಲೀಲಾ ಭೂಮಿ ಇದು. ಅಮೃತಮಯ ದಿವ್ಯ ತೇಜಸ್ಸಿನಿಂದ ಕೂಡಿದ ಸ್ವಯಂಭೂಲಿಂಗನಾಗಿ ಶಾಂತಮೂರ್ತಿಯಾದ ಭೀಮೇ

ಶ್ವರಸ್ವಾಮಿ ನೆಲೆಸಿರುವ ಮೋಕ್ಷಧಾಮವಾದ, ಭೋಗಕ್ಕೆ ಜನ್ಮ ಸ್ಥಳವಾದ, ಪುಣ್ಯಕ್ಷೇತ್ರವಿದು.)

ಈ ಕ್ಷೇತ್ರಕ್ಕೆ ಭೀಮಮಂಡಲವೆಂದು ಹೆಸರುಕೊಟ್ಟ ಭೀಮೇಶ್ವರಸ್ವಾಮಿಯು ಈ ಕ್ಷೇತ್ರಕ್ಕೆ ಬಂದು ನೆಲೆಸಿದ ಸಂದರ್ಭ ವಿದು :

"ಅಂಬಿಕಾವಲ್ಲಭುಂದು ತ್ರಿಪುರ ದೈತೇಯುಲ ಕುಲದೈವಂ ಬೈನ ಯದ್ದಿವ್ಯ ಲಿಂಗಂಬುನು ಬಂಚಬ್ರಹ್ಮ ಪಂಚಾಕ್ಷರೀ ಪಂಚ ತತ್ವ ಪಂಚಭೂತಮಯಂಬಗುಟಂಜೇಸಿ ಪಂಚಖಂಡಂಬುಲುಗಾ ಖಂಡಿಂಚಿ ಕೃಷ್ಣವೇಣೀ ಮಹಾನದೀ ತೀರಮುನ ಭೋಗಮೋಕ್ಷ ಪ್ರದಂಬುಲೈನ ಪಂಚಾರಾಮಂಬುಲನು ಪ್ರತಿಷ್ಠನೊಂದಿಂಚಿ ತಾನು ದಕ್ಷವಾಟಂಬುನ ಶ್ರೀ ಭೀಮೇಶ್ವರ ಲಿಂಗಮುನಂದಧಿವಸಿಂಚೆ"

(ಅಂಬಿಕಾವಲ್ಲಭನು ತ್ರಿಪುರಾಸುರನನ್ನು ಕೊಂದು ಅವನ ಕುಲ ದೈವವಾದ ಆ ದಿವ್ಯ ಲಿಂಗವು ಪಂಚಬ್ರಹ್ಮ ಪಂಚಾಕ್ಷರೀ ಪಂಚತತ್ವ ಪಂಚಭೂತಮಯವಾದುದರಿಂದ ಅದನ್ನು ಐದು ಚೂರುಗಳಾಗಿ ಖಂಡಿಸಿ ಕೃಷ್ಣಾನದೀ ತೀರದಲ್ಲಿ ಭೋಗಮೋಕ್ಷ ಪ್ರದಗಳಾದ ಪಂಚ ಆರಾಮಗಳಲ್ಲಿ ಪ್ರತಿಷ್ಠೆಮಾಡಿ ತಾನು ದಕ್ಷವಾಟಿಯಲ್ಲಿ ನೆಲಸಿದನು.)

ಈ ಭೀಮಮಂಡಲದ ಮಧ್ಯೆ ಐದು ಆರಾಮಗಳಿವೆ. ಅಮರಾರಾಮ, ಸೋಮಾರಾಮ, ಕ್ಷೀರಾರಾಮ, ಭೀಮಾರಾಮ ಮತ್ತು ದಕ್ಷಾರಾಮ. ಇವುಗಳಲ್ಲಿ ಕ್ರಮವಾಗಿ ಅಮರಲಿಂಗ, ಸೋಮಲಿಂಗ, ರಾಮಲಿಂಗ, ಕುಮಾರ ಭೀಮಲಿಂಗ ಮತ್ತು ಭೀಮೇಶ್ವರ ಲಿಂಗಗಳಿವೆ.

ಭೀಮಮಂಡಲದ ಮೇರೆಗಳಿಂದ ಮೊದಲು ಮಾಡಿಕೊಂಡು ಅಲ್ಲಿ ನೆಲಸಿರುವ ದೇವತೆಗಳು, ಪುಣ್ಯತೀರ್ಥಗಳು ಅವುಗಳ

ಪೂರ್ವಕಥೆಗಳು ಎಲ್ಲವನ್ನೂ ಕವಿ ಈ ಗ್ರಂಥದಲ್ಲಿ ವಿಸ್ತಾರವಾಗಿ ವರ್ಣಿಸಿದ್ದಾನೆ. ಇಷ್ಟೇ ಆಗಿದ್ದರೆ ಇದು ಒಂದು ಮಾಹಾತ್ಮ್ಯಗ್ರಂಥ ವಾಗಿ ಲೋಕದ ಮೆಚ್ಚುಗೆಗೆ ಪಾತ್ರವಾಗದೆ ಕೇವಲ ಭಕ್ತರ "ಪೂಜ್ಯ ಗ್ರಂಥ" ವಾಗಿರಬಹುದಾಗಿತ್ತು. ಶ್ರೀನಾಥನು ತನ್ನ ಪ್ರತಿಭಾತಿಶಯದಿಂದ ಈ ಕಥಾವಸ್ತುವನ್ನು—ಕಥೆಯಿರುವುದೇ ಬಹಳ ಸ್ವಲ್ಪ—ರಸವತ್ತಾಗಿ ಹೇಳಿ ಅನೇಕ ಉಪಾಖ್ಯಾನಗಳನ್ನು ಸೇರಿಸಿ ಸಮುಯೋಚಿತ ವರ್ಣನೆಗಳಿಂದ ಅಲಂಕರಿಸಿ ಇದನ್ನು ಉತ್ತಮ ಕಾವ್ಯವಾಗಿ ಮಾಡಿದ್ದಾನೆ. ಇಂಥಾ ಪುರಾಣ ಕಾವ್ಯ ದಲ್ಲಿಯೂ ಶ್ರೀನಾಥನು ಅವಕಾಶ ಕಲ್ಪಿಸಿಕೊಂಡು ರಸಿಕರಂಜನೆ ಮಾಡಿದ್ದಾನೆ. ಭೀಮೇಶ್ವರಸ್ವಾಮಿಯ ಈ ವರ್ಣನೆಯನ್ನು ಅವಲೋಕಿಸೋಣ :

> ಗಜಚರ್ಮಮೆನ್ನಡೋಕಾನಿ ನಿಚ್ಚಲು ಗಟ್ಟು
> ಪಸಿಡಿಕಮ್ಮೃಲ ಪಟ್ಟು ಪಚ್ಚಡಂಬು
> ಭಸಿತಮೆನ್ನಡೋಕಾನಿ ಪ್ರತಿದಿನಂಬು ನಲಂದು
> ಮಲಯಜಂಬು ಕುರಂಗ ಮದಮು ಗೂರ್ಚಿ
> ನಿಡುದ ಪಾಮುಲರಾಜು ತೊಡವುಲೆನ್ನಡೋ ಕಾನಿ
> ತಾರಹಾರಮುಲು ನಿತ್ಯಮು ಧರಿಂಚು
> ನೃಕರಂಕ ರುಂಡ ಮಾಲಿಕಲೆನ್ನಡೋ ಕಾನಿ
> ಧರಿಯಿಂಚು ಕಲ್ಹಾರ ಮಾಲ ಯೆಪುಡು
> ಕಾಟಿನಡು ಚೆಕ್ಕಿನೆನ್ನಡೋ ಕಾನಿ ಯುಂಡು
> ದಕ್ಷವಾಟಿ ಸುವರ್ಣಸೌಧಮುಲಮೀದ
> ನೆನ್ನಡೋ ಪಿಶಾಚುಲನು ಗಾನಿ ಯಿಂದುಮುಖುಲ
> ನೆಲ್ಲ ಕಾಲಂಬು ದಲಂಚು ಭೀಮೇಶ್ವರುಂಡು

(ಗಜಚರ್ಮವನ್ನು ಎಂದು ಧರಿಸುತ್ತಿದ್ದನೋ ಏನೋ ನಮ್ಮ ಭೀಮೇಶ್ವರನು ಸದಾ ಸರಿಗೆಯುಂಚಿನ ರೇಷ್ಮೆ ಪಂಚೆಯನ್ನುಡು ತ್ತಾನೆ. ಬೂದಿಯನ್ನು ಎಂದು ಬಳಿದು ಕೊಳ್ಳುತ್ತಿದ್ದನೋ ಏನೋ,

ಪ್ರತಿದಿನವೂ ಈಗ ಶ್ರೀಗಂಧ ಕಸ್ತೂರಿಗಳನ್ನೇ ಅರೆದು ಮೈಗೆ ಹಚ್ಚಿಕೊಳ್ಳುತ್ತಾನೆ. ಸರ್ಪಾಭರಣಗಳೆಂದಿದ್ದುವೋ ಏನೋ, ಈಗ ನಿತ್ಯವೂ ಮುತ್ತಿನ ಹಾರಗಳನ್ನೇ ಧರಿಸುತ್ತಿದ್ದಾನೆ. ರುಂಡ ಮಾಲಾಧಾರಿಯಾಗಿದ್ದನೋ ಇಲ್ಲವೋ ತಿಳಿಯದು. ಈಗ ಭೀಮೇಶ್ವರನು ಸದಾ ಕಲ್ಹಾರ ಮಾಲೆಗಳನ್ನು ಧರಿಸುತ್ತಾನೆ. ಸ್ಮಶಾನವಾಸಿಯೆಂದು ಜನ ಹೇಳುತ್ತಾರೆ. ಆದರೆ ಅವನು ಈಗ ಎಲ್ಲ ಕಾಲದಲ್ಲಿಯೂ ದಕ್ಷಾರಾಮದ ಸೌಧಗಳಲ್ಲಿದ್ದಾನೆ. ಅವನ ಜತೆಯಲ್ಲಿ ಪಿಶಾಚಿಗಳಿರುವರೆಂದು ಹೇಳುವರೇ ಹೊರತು ಈಗ ಅವನ ಬಳಿ ಸದಾ ಇಂದುಮುಖಿಯರೇ ಇರುತ್ತಾರೆ.) ಶ್ರೀನಾಥನ ಕೈಲಿ ಸಿಕ್ಕಿ ಶಿವನು ಶೃಂಗಾರ ಪ್ರಿಯನಾಗಿದ್ದಾನೆ! ಇಷ್ಟೇ ಅಲ್ಲ, ಆ ದಕ್ಷಿಣಾಮೂರ್ತಿಯನ್ನೂ ಶ್ರೀನಾಥನು ರಸಿಕನನ್ನಾಗಿ ಮಾಡಿ ವೇಶ್ಯಾವಾಟಿಗೆ ಕರೆದೊಯ್ದಿದ್ದಾನೆ :—

ಎನಯಂ ಗಲ್ಗಿನ ಕೂರ್ಮಿ ಭೃಂಗಿರಿಟಿ ಗಾನೀ, ತಂಡುಗಾನೀ ನಿಕುಂ
ಭುನಿ ಗಾನೀ ಕಯಿದಂಡ ಪಟ್ಟುಕೊನಿ ಸಂಭೋಗೇಚ್ಛನಂತಃಪುರಾಂ
ಗನಲಂ ಗನುಮೊಜಿಂಗಿ ಯಪ್ಪುರಮುನಂಗನ್ನೇಜು ಕಾದಾರಿಪ್ರೊ
ದ್ದುನ ಭೀಮೇಶುಂಡು ಸಾನಿವಾಡ ಕರುಗುನ್ ಧೂರ್ತ ಪ್ರಕಾರಂ ಬುನನ್.

(ಭೀಮೇಶ್ವರನು ಅರ್ಧರಾತ್ರಿಯ ವೇಳೆಯಲ್ಲಿ ಭೃಂಗಿ, ರಿಟಿ ತಂಡು, ನಿಕುಂಭ ಮೊದಲಾದವರಲ್ಲಿ ಯಾರನ್ನಾದರೂ ಜತೆಗೆ ಕರೆದು ಕೊಂಡು ಅಂತಃಪುರಾಂಗನೆಯರ ಕಣ್ಣು ಮರೆಸಿ ಸಂಭೋಗೇಚ್ಛೆ ಯಿಂದ ಧೂರ್ತರೀತಿಯಲ್ಲಿ ಸಾನಿಯ ಮನೆಗೆ ಹೋಗುತ್ತಿದ್ದನು). ಶ್ರೀನಾಥನ ಉಪಾಸ್ಯ ದೇವವಾದಮೇಲೆ ಶಿವನಾದರೆ ತಾನೆ ಏನು? ಅವನೂ ಭಕ್ತನ ಇಚ್ಛೆಯನ್ನು ಅನುಸರಿಸಲೇಬೇಕು! ಭಕ್ತ ಪರಾಧೀನನಲ್ಲವೇ ಭಗವಂತ! ಇಂಥಾ ಸನ್ನಿವೇಶವನ್ನು ಕಲ್ಪಿಸಿ ಶ್ರೀನಾಥನು ದಕ್ಷಾರಾಮ ಭೀಮವರಾಪ್ಸರಾಂಗನೆಯರ ನೃತ್ಯ

ಲೀಲಾ ವೈಭವವನ್ನು ಓದುಗರ ಮನದಣಿಯುವಂತೆ ವರ್ಣಿಸಿದ್ದಾನೆ. ಶ್ರೀನಾಥನ ಕಲ್ಪನಾ ಶಕ್ತಿ, ಸನ್ನಿವೇಶ ರಚನಾಚಾತುರ್ಯ, ಸಂಭಾಷಣೆಗಳನ್ನು ನಡೆಸುವ ಬೆಡಗು, ಇವನ್ನು ವರ್ಣಿಸಿ ಹೇಳುವುದು ಸುಲಭವಲ್ಲ. ಸ್ಕಾಂದಪುರಾಣಾಂತರ್ಗತವಾದ ಗೋದಾವರೀ ಖಂಡವೇ ಈ ಗ್ರಂಥಕ್ಕೆ ಮೂಲ. ಆದರೆ ಅದರಲ್ಲಿಲ್ಲದ ಹಲವು ಸುಂದರ ಕಲ್ಪನೆಗಳನ್ನು ತಂದಿಟ್ಟು ಶ್ರೀನಾಥನು ಈ ಕಾವ್ಯದಲ್ಲಿ ರಸಪ್ರವಾಹವನ್ನೇ ಹರಿಸಿದ್ದಾನೆ'

ಭೀಮಖಂಡದಲ್ಲಿ ನನಗೆ ಬಹಳ ಮೆಚ್ಚಿಗೆಯಾದ ಒಂದು ಚಿಕ್ಕ ಪ್ರಕರಣವೆಂದರೆ ವ್ಯಾಸಮಹರ್ಷಿ ಕಾಶೀನಗರವನ್ನು ಬಿಟ್ಟು ದಕ್ಷಾರಾಮಕ್ಕೆ ಬಂದು ಸೇರಿದ ಕಥಾವೃತ್ತಾಂತ. ಇದನ್ನು ವ್ಯಾಸನೇ ಅಗಸ್ತ್ಯನೊಡನೆ ಹೇಳಿಕೊಳ್ಳುತ್ತಾನೆ. ಇದರಲ್ಲಿ ಶ್ರೀನಾಥ ಕವಿಯ ಕಲ್ಪನಾ ವಿಲಾಸ ವೈಭವಗಳನ್ನು ಮನಗಾಣಬಹುದಾಗಿದೆ.

ವ್ಯಾಸಮಹರ್ಷಿಯು ಶಿವನ ಕೋಪಕ್ಕೆ ಗುರಿಯಾಗಿ ಕಾಶೀಕ್ಷೇತ್ರವನ್ನು ಬಿಟ್ಟು ದಕ್ಷಾರಾಮಕ್ಕೆ ಬಂದಾಗ ಅಗಸ್ತ್ಯನು ಅವನನ್ನು ಆದರಿಸಿ ಕುಶಲ ಪ್ರಶ್ನೆಯಾದಮೇಲೆ ಆತನನ್ನು ಕುರಿತು “ಅನಘ, ನಿನ್ನ ಮುಖವೇಕೆ ಮ್ಲಾನವಾಗಿದೆ? ಆ ಪುಣ್ಯಕ್ಷೇತ್ರವಾದ ಕಾಶಿಯನ್ನು ಬಿಡಲು ಕಾರಣವೇನು? ಆ ಇಂದುಧರಸನ್ನಿಧಿಯನ್ನು ತ್ಯಜಿಸಲು ಹೇಗೆ ಮನಸ್ಸು ಬಂತು?” ಎಂದು ಪ್ರಶ್ನಿಸಿದನು. ಆದರೆ ವ್ಯಾಸನು ಉತ್ತರವನ್ನೇ ಹೇಳಲಿಲ್ಲ. ಅವನ ವ್ಯಥೆ ಇನ್ನಿಷ್ಟು ಹೆಚ್ಚಾಯಿತು. ಅಗಸ್ತ್ಯನು ಮತ್ತೆ ಮತ್ತೆ ಕೇಳಿದಮೇಲೆ ವ್ಯಾಸನು ಹೇಳತೊಡಗಿದನು: “ವಾತಾಪಿದಮನ, ನಾನು ನನ್ನ ಶಿಷ್ಯರನ್ನೂ ಜತೆಯಲ್ಲಿ ಕರೆದುಕೊಂಡು ಕ್ಷೇತ್ರಯಾತ್ರೆ ಮಾಡುತ್ತ ಕಾಶಿಗೆ ಬಂದೆ. ಯಾವ ದುರ್ಮುಹೂರ್ತದಲ್ಲಿ ಆ ನಗರವನ್ನು ಸೇರಿದೆನೋ ಆ ಶಿವಕ್ಷೇತ್ರದಲ್ಲಿ ಏಳುದಿನಗಳಕಾಲ

ನಮಗೆ ಆಹಾರ ಲಭಿಸಲಿಲ್ಲ. ಉಪವಾಸದಿಂದ ನಾವು ಸೋತು ಹೋದೆವು. ಯಾವ ಮನೆಗೆ ಹೋಗಿ 'ಭಿಕ್ಷಾಂದೇಹಿ' ಎಂದು ಬೇಡಿದರೂ ಯಾವ ಮನೆಯ ಒಡತಿಯೂ ಒಂದು ಹಿಡಿ ಆಹಾರವನ್ನು ನಮಗೆ ನೀಡಲಿಲ್ಲ. ನನ್ನ ಜತೆಯ ಮುನಿಗಳೆಲ್ಲ ಬಹಳ ದುಃಖಿಸಿದರು. 'ಉದರೋದಗ್ರ ಕ್ಷುಧಾ ಕ್ಷೋಭೆ'ಯಿಂದ ನಾವೆಲ್ಲರೂ ಕಂಗೆಟ್ಟೆವು.

"ಹೀಗೆ ಏಳುದಿನ ಉಪವಾಸವಿದ್ದು ಎಂಟನೆಯ ದಿನ ಗಂಗಾ ಸ್ನಾನಮಾಡಿ ಕ್ಷೇತ್ರಯಾತ್ರೆ ಮುಗಿಸಿ ಮುಕ್ತಿ ಮಂಟಪದಲ್ಲಿ ಕೊಂಚ ಹೊತ್ತಿದ್ದು ಮಧ್ಯಾಹ್ನ ಕಾಲದಲ್ಲಿ ಭಿಕ್ಷಾ ಪಾತ್ರೆಯನ್ನು ಕೈಲಿ ಹಿಡಿದು ಮನೆಮನೆಗೂ ಹೋದುದಾಯಿತು. ಆದರೆ ಏನೂ ಪ್ರಯೋಜನವಾಗಲಿಲ್ಲ. ಬಿಸಿಲಿನ ಝಳದಿಂದ ಮೈ ಬೆವತಿತು. ನನ್ನ ಪ್ರಜ್ಞಾವಿಭವವೆಲ್ಲ ನಷ್ಟವಾಗಿ ಎಂದೂ ಇಲ್ಲದ ನೈಚ್ಯ ವುಂಟಾಯಿತು. ನಾನು

"ನಿಖಿಲಕೈವಲ್ಯಕಲ್ಯಾಣನಿಲಯಮೈನ
ಕಾಶಿಪೈ ಗೂಡುಲೇಕುಂಡು ಕಾರಣಮುನ
ನಲಿಗಿ ಶಪಿಯಿಂಪಗಾಬೂನಿ ಯಂದುಕೊಂಟಿ
ಧೃತಕಮಂಡಲು ಭಾಗಿರಥೀ ಜಲಂಬು"

(ಕೂಳು ಹುಟ್ಟದ ಕಾರಣದಿಂದ ಸಮಸ್ತ ಕೈವಲ್ಯನಿಲಯವಾದ ಕಾಶಿಯಮೇಲೆ ಸಿಟ್ಟಾಗಿ ಶಾಪಹಾಕಲು ಸಿದ್ಧನಾಗಿ ಕಮಂಡಲ ದಲ್ಲಿದ್ದ ಭಾಗೀರಥೀ ಜಲವನ್ನು ಕೈಗೆ ತೆಗೆದುಕೊಂಡೆ. ನನ್ನ ಶಿಷ್ಯರೆಲ್ಲರೂ ಈ ಕೋಪವನ್ನು ಉಪಸಂಹರಿಸಬೇಕೆಂದು ಬೇಡಿ ಕೊಂಡರು. ಆದರೆ ನನ್ನ ಕೋಪ ತಗ್ಗಲಿಲ್ಲ. ನಾನು ಹೀಗೆ ಶಪಿಸಬೇಕೆಂದು ಪ್ರಯತ್ನಿಸಿದೆ :

ಮಾಭೂತ್ತೈ ಪೌರುಷೀವಿದ್ಯಾ
ಮಾಭೂತ್ತ್ರೈ ಪೌರುಷಂ ಧನಂ

ಮಾಭೂತ್ತ್ರೈ ಪೂರುಷೀ ಭಕ್ತಿಃ
ಕಾಶ್ಯಾಂ ನಿವಸತಾಂ ಸದಾ

(ಕಾಶಿಯಲ್ಲಿ ವಾಸಿಸುವ ಜನಕ್ಕೆ ಇನ್ನು ಮೂರು ಜನ್ಮಗಳಲ್ಲಿ ಭಕ್ತಿ, ಧನ, ವಿದ್ಯೆಗಳಿಲ್ಲದೆ ಹೋಗಲಿ.) ಆದರೆ ನನಗೆ ಶಪಿಸಲು ಸಾಧ್ಯವಾಗಲಿಲ್ಲ. ನನ್ನ ಕೋಪ ಸಂಕಟಗಳು ಮಾತ್ರ ತಗ್ಗಲಿಲ್ಲ. ಆ ಸಮಯದಲ್ಲಿ ಒಬ್ಬ ಮುತ್ತೈದೆ ತನ್ನ ಮನೆಯ ಬಾಗಿಲು ತೆರೆದು 'ಓ ಬ್ರಾಹ್ಮಣೋತ್ತಮಾ! ಶಾಪವನ್ನು ಉಪಸಂಹರಿಸು ಹೀಗೆ ಬಾ' ಎಂದು ಕರೆದಳು ".

ಇಂಥಾ ಸಂಕಟದ ಸಮಯದಲ್ಲಿಯೂ ಶ್ರೀನಾಥನ ವ್ಯಾಸನಿಗೆ ಆ ಹೆಂಗಸಿನ ರೂಪಲಾವಣ್ಯಗಳು ಗೋಚರಿಸದೆ ಹೋಗಲಿಲ್ಲ. ಆಕೆಯ 'ವಿಶಾಕ್ವಾಣ'ದಂತಹ ಧ್ವನಿಯ ಮಾಧುರ್ಯ ಅನುಭವ ವಾಗದಿರಲಿಲ್ಲ.

"ಆಗ ನಾನು ಆಕೆಯನ್ನು ಸಮೀಪಿಸಲು ಈ ಕಾಂತೆಯು "ಮುನಿವರೇಣ್ಯ, ಭಿಕ್ಷೆ ಸಿಕ್ಕಲಿಲ್ಲವೆಂದು ಹೀಗೆ ಕೋಪಿಸಬಹುದೆ? ಶಿವನು ನಿನ್ನನ್ನು ಈ ರೀತಿಯಾಗಿ ಪರೀಕ್ಷಿಸಿದನು. ನಿನಗೆ ಕೂಳೇ ದೊಡ್ಡ ವಿಷಯವಾಯಿತೆ? ಶ್ರೀ ವಿಶಾಲಾಕ್ಷಿಯು ಕಾಶಿಕಾಪುರಿ ಯಲ್ಲಿ ಮಧ್ಯಾಹ್ನ ವೇಳೆಯಲ್ಲಿ ಅಮೃತ ಪಾಯಸಾನ್ನವನ್ನೇ ಕೊಡುತ್ತಾಳೆ. ಇದು ನಿನಗೆ ತಿಳಿಯದೆ? ಮುನೀಶ್ವರ, ಏಳು ದಿನಗಳು ಅನ್ನ ದೊರೆಯದೇ ಹೋದ ಮಾತ್ರಕ್ಕೇ ಹೀಗೆ ಆಳಬಹುದೆ? ನಿನ್ನ ಧೈರ್ಯವೇನಾಯಿತು? ಈ ಕಾಶಿಕಾನಗರೀ ಲಲಾಮಳಿಗೆ ನೀನು ಹೀಗೆ ಶಾಪವಿಕ್ಕಲು ಹವಣಿಸಬಹುದೆ? ಈ ನಗರಿಯು ಶಿವನಿಗೆ ಪ್ರಿಯಳಾದ ಭೋಗಪುರಂಧ್ರಿಯಲ್ಲವೆ? ನಿನ್ನ ಈ ವರ್ತನೆಯಿಂದ ಆ ಚಂದ್ರಮೌಳಿಗೆ ಎಷ್ಟು ಕೋಪ ಬಂದಿರ ಬಹುದು? ಕಾಶಿಯ ಮೇಲೆ ಕೋಪಿಸಿಕೊಳ್ಳಲು ನಿನ್ನಿಂದಾಗದು.

ಅದು ಹಾಗಿರಲಿ. ಈಗ ಭಿಕ್ಷೆ ತೆಗೆದುಕೋ ಬಾ" ಎಂದಳು. ಆಗ ನಾನು ನನ್ನ ಶಿಷ್ಯರನ್ನು ಬಿಟ್ಟು ಒಬ್ಬನೇ ಊಟಕ್ಕೆ ಬರಲಾರ ನೆನ್ನಲು ಆಕೆ ನಿನ್ನೆಲ್ಲ ಶಿಷ್ಯರನ್ನೂ ಜತೆಯುವರನ್ನೂ ಕರೆದು ಕೊಂಡು ಬಾ. ನಿಮ್ಮೆಲ್ಲರಿಗೂ ಭಿಕ್ಷೆ ನೀಡುತ್ತೇನೆ. ಎಂದು ಹೇಳಿ ಒಳಗೆ ಹೋದಳು.

"ಆಗ ನಾನು 'ವಿಯಲ್ಲೋಕಕಲ್ಲೋಲಿನಿ'ಗೆ ಹೋಗಿ ಸ್ನಾನ ಪಾಚರಿಸಿ ವೇದಪಠನ ಮಾಡುತ್ತ ಬಂದು ಆ ಮೀನನೇತ್ರೆಯ ಮನೆಯ ಮೊಗಸಾಲೆಯಲ್ಲಿ ಶಿಷ್ಯಸಮೇತನಾಗಿ ಕುಳಿತು ಕೊಂಡೆನು. ಕೊಂಚ ಹೊತ್ತಿಗೆಲ್ಲ ಆಕೆ ಹೊರಗೆ ಕಾಣಿಸಿಕೊಂಡು ನಮ್ಮನ್ನೆಲ್ಲ ಒಳಗೆ ಕರೆದಳು. ಒಳಗೆ ಹೋಗಿ ಚತುಶ್ಶಾಲೆಯಲ್ಲಿ ವೃದ್ಧಾನುಪೂರ್ವಕವಾಗಿ ಸಾಲುಗಟ್ಟಿ ಕುಳಿತುಕೊಂಡೆವು. ಆಗ ಆಕೆಯ ಸೇವಕಿಯರಾದ, ದಿವ್ಯ ಪುಂರಧ್ರಿಯರು ಹಸನಾದ ಅಗ್ರದ ಬಾಳೆಲೆಗಳನ್ನು ನಮಗೆ ಕೊಟ್ಟರು. ಅನಂತರ ಆ ಮನೆಯೊಡತಿ ನಮಗೆ ಅರ್ಚನೆಮಾಡಿ ಉಪಚಾರೋಕ್ತಿಗಳನ್ನು ಹೇಳಿ ಮಂತ್ರಪಠನೆ ಮಾಡುವಂತೆ ಪ್ರಾರ್ಥಿಸಿದಳು. ಆದರೆ ಅನ್ನ ಬರುವ ಲಕ್ಷಣಗಳೇ ನಮಗೆ ಕಾಣಲಿಲ್ಲ. ಅಡಿಗೆ ಮಾಡಿದ ರೀತಿಯೇ ತೋರಲಿಲ್ಲ. ಶಾಕಾದಿ ಪರಿಕರಗಳ ಪರಿಮಳವೂ ಅನುಭವಕ್ಕೆ ಬರಲಿಲ್ಲ. ಪಾತ್ರಶುದ್ಧಿಗೆ ತುಪ್ಪವನ್ನು ಹಾಕಿ ಸುಮ್ಮನಾದರಲ್ಲ! ಇದೇನು ವಿಚಿತ್ರ? ಎಂದು ನಾವು ಪರಸ್ಪರ ಹೀಗೆ ಮಾತನಾಡಿಕೊಂಡೆವು. ಆಗ ಆ ಮನೆಯೊಡತಿ ಎಲ್ಲರಿಗೂ ಆಪೋಶನ ಹಾಕಿ ತಾನು ಕೈಲಿ ನೀರನ್ನು ಹಿಡಿಯುತ್ತಲೂ ಎಲ್ಲರ ಎಲೆಗಳಲ್ಲಿಯೂ ಭಕ್ಷ್ಯಭೋಜ್ಯ ಚೋಹ್ಯ ಲೇಹ್ಯ ಶಾಕಾದಿ ಪರಿಕರಗಳು ತುಂಬಿ ಹೋದವು. ನಾವು ಊಟಮಾಡಿ ದಂತೆಲ್ಲ ಅವರವರಿಗೆ ಬೇಕಾದ ಪದಾರ್ಥಗಳು ಎಲೆಗಳಲ್ಲಿ ಬೇಕಾದ

ಪ್ರಮಾಣದಲ್ಲಿ ಸಿದ್ಧವಾಗುತ್ತಿದ್ದುವು. ಓ ಮಹಾತ್ಮ! ಆ ಆಜ್ಯ ಧಾರಾಪ್ರವಾಹ, ಪಾಯಸಾಪೂಪಗಳು, ಆ ಕಲಮಾನ್ನ, ರಂಭಾನಾರಿಕೇಳಫಲಗಳು ಅವುಗಳನ್ನೆಲ್ಲ ವರ್ಣಿಸಲು ಶಕ್ಯವಲ್ಲ. ಆ ಭೋಜನ ವೈಭವ ವರ್ಣನಾತೀತ. ನಾವೆಲ್ಲ ತೃಪ್ತಿಯಾಗಿ ಊಟ ಮಾಡಿದೆವು. ಆಮೇಲೆ ಕೈತೊಳೆದು ಆಚಮನ ಮಾಡಿ ದೇವಿಯ ಆಜ್ಞೆಯಂತೆ ಆ ಸೌಧಮಧ್ಯದ ವೇದಿಕಾಸ್ಥಳದಲ್ಲಿ ಸೇರಿದೆವು. ಆಗ ಅಭ್ಯಂತರಭವನದಿಂದ ಗೌರೀ ವಿಶ್ವನಾಥರು ಬಂದ ವೈಭವವಿದು :

ಚಂದ್ರಬಿಂಬಾಸನ ಚಂದ್ರರೇಖಾವೌಳಿ
ನೀಲಕುಂತಳಭಾರ ನೀಲಗಳುಡು
ಧವಳಾಯತೇಕ್ಷಣ ಧವಳಾಖಿಲಾಂಗುಂಡು
ಮದನಸಂಜೀವಿನೀ ಮದನಹರುಂಡು
ನಾಗೇಂದ್ರ ನಿಭಯಾನ ನಾಗ ಕುಂಡಲಧಾರಿ
ಭುವನ ಮೋಹನ ಗಾತ್ರ ಭುವನಕರ್ತ
ಗಿರಿರಾಜಕನ್ಯಕ ಗಿರಿರಾಜನಿಲಯುಂಡು.
ಸರ್ವಾಂಗಸುಂದರಿ ಸರ್ವಗುರುಡು
ಗೌರೀಶ್ರೀವಿಶ್ವನಾಥುಂಡು ಕನಕರತ್ನ
ಪಾದುಕಲು ಮೆಟ್ಟಿ ಚಟ್ಟಲು ಪಟ್ಟಿಕೊನುಚು
ನೇಗುದೆಂಚಿರಿ ಯೊಯ್ಯಾರ ಮೆಸಕಮೊಸಗ
ವಿಹರಣಕ್ರೀಡ ಮಾಯುನ್ನ ವೇದಿಕಪುಡು.

(ಚಂದ್ರಬಿಂಬಾನನೆ, ಚಂದ್ರರೇಖಾಮೌಳಿ. ನೀಲಕುಂತಳ ಭಾರ, ಪುಳ್ಳವಳು. ನೀಲಕಂಠ. ಧವಳಾಯತೇಕ್ಷಣೆ, ಧವಳ ದೇಹಿ, ಅವಳು ಮದನ ಸಂಜೀವಿನಿ ಇವನು. ಮದನಹರ, ಗಜೇಂದ್ರ ಗಮನೆ, ನಾಗಕುಂಡಲಧಾರಿ. ಭುವನಮೋಹನಾಕಾರೆ, ಭುವನ ಕರ್ತ. ಗಿರಿರಾಜಕನ್ಯಕೆ, ಗಿರಿರಾಜನಿಲಯನು. ಸರ್ವಾಂಗ ಸುಂದರಿ ಸರ್ವಗುರುವು—ಇಂಥಾ ಗೌರೀವಿಶ್ವನಾಥರು ಕನಕರತ್ನಮಯ

ವಾದ ಪಾದುಕೆಗಳನ್ನು ಮೆಟ್ಟಿಕೊಂಡು ಒಬ್ಬರೊಬ್ಬರ ಕೈ ಹಿಡಿದು ಕೊಂಡು ನಾವಿದ್ದ ವೇದಿಕೆಗೆ ಬಂದರು.)

"ಆಗ ಅವರ ಜತೆಯಲ್ಲಿ ಜಯವಿಜಯೆಯರಾಗಲಿ, ನಂದಿಯಾಗಲಿ ಬರಲಿಲ್ಲ. ಅವರಿಬ್ಬರೇ ಬಂದರು. ಆ ಸಮಯದಲ್ಲಿ ಗೌರಿಯ ಮುಖದಲ್ಲಿ ಅಮಿತವಾದ ಕಾರುಣ್ಯ ತೋರುತ್ತಿತ್ತು. ಆ ತಾರಾನಾಯಕ ಮೌಳಿಯನ್ನು ನೋಡಿದರೆ ವಿಶೇಷ ಕ್ರೋಧ ಸಂರಂಭ ಕಾಣುತ್ತಿತ್ತು. ಅವರನ್ನು ನೋಡಿ ನಮ್ಮ ಅಂತರಂಗದಲ್ಲಿ ಸಂತೋಷಸಂತ್ರಾಸಗಳೆರಡೂ ತುಂಬಿಹೋದವು. ನಾವು ಎದ್ದು ಆ ಪ್ರಥಮ ದಂಪತಿಗಳಿಗೆ ನಮಸ್ಕರಿಸಿದೆವು. ಆಗ ಪರಶಿವನು ನನ್ನಕಡೆ ನೋಡಿ "ಎಲ್ಲವೋ ದುರಾತ್ಮ, ಯೋಜನಗಂಧೀ ಪ್ರಥಮಪುತ್ರ, ಬಹು ಸಂಹಿತಾವೃಥಾಪಾಠ ಪಠನ, ಭಾರತ ಗ್ರಂಥಗುಂಭನಪಂಡಿತಂಮನ್ಯ, ನೀನೇ, ನನ್ನ ಪತ್ನಿಗೆ, ಅಶೇಷ ಕಲ್ಯಾಣ ಘಂಟಾಪಥಳೆನಿಸಿದ ಕಾಶಿಕಾಪಟ್ಟಣಕ್ಕೆ, ನಿಷ್ಕಾರಣವಾಗಿ ಶಾಪಕೊಡಲೆಳಸಿದವನು? ದುರಹಂಕಾರಿ, ಹೋಗು, ನಿರ್ಭಾಗ್ಯ! ನನ್ನ ಊರಿನ ಮೇರೆಯಿಂದಾಚೆಗೆ ಎಲ್ಲಿಗಾದರೂ ಹೋಗು! ಈ ಕ್ಷಣವೇ ನೀನೂ ನಿನ್ನ ಶಿಷ್ಯರೂ ಹೊರಡಿ. ಹೊರಡದಿದ್ದರೆ ನಿನ್ನ ಮುಸುಡಿಯನ್ನು ಬಂಡೆಗೆ ಹಾಕಿ ತಿಕ್ಕಿಸಿಬಿಟ್ಟೇನು" ಎಂದು ಗರ್ಜಿಸಿದನು. ಆ ಕ್ಷಣವೇ ಆ ಅನ್ನಪೂರ್ಣಾದೇವಿ ಕನಿಕರದಿಂದ "ಅಂಜದಿರು ಕುಮಾರ. ನಿನ್ನನ್ನು ನಾನು ಎಂದಿಗೂ ಮರೆಯೆನು. ನೀನು ಮತ್ತೆಲ್ಲಿಗೂ ಹೋಗದೆ ದಕ್ಷಾರಾಮಕ್ಕೆ ಹೋಗು. ಅಲ್ಲಿನ ಭೀಮನಾಯಕನು ಅರೆಕೊರೆಗಳಿಲ್ಲದ ದೇವರು; ನಿನಗೆ ನಿಬಿಲಾಭ್ಯುದಯಂಗಳನ್ನೂ ಅನುಗ್ರಹಿಸುತ್ತಾನೆ" ಎಂದಳು. ಸ್ವಾಮಿ, ಇದೋ ಕಾಶಿಯಿಂದ ಹೊರಟು ಅಂಬಿಕೆಯ ಮಾತಿನಂತೆ ಇಲ್ಲಿಗೆ ಬಂದಿದ್ದೇನೆ." ಹೀಗೆ ವ್ಯಾಸನು ತನ್ನ ಕರುಣಕತೆ

ಯನ್ನು ಹೇಳಿ ಮುಗಿಸಲು ಅಗಸ್ತ್ಯನು ಆತನಿಗೆ ದಕ್ಷಾರಾಮ ಕ್ಷೇತ್ರದ ವಿವರಗಳನ್ನೆಲ್ಲ ಹೇಳಿ ಅಲ್ಲಿನ ಸುಂದರ ಪ್ರದೇಶಗಳನ್ನೆಲ್ಲ ತೋರಿ ಆ ಕ್ಷೇತ್ರ ಮಹಾತ್ಮ್ಯೆಯನ್ನು ಹೊಗಳಿ ಹಾಡಿದನು. ಶ್ರೀನಾಥ ಕವಿಯು ಅಗಸ್ತ್ಯ ಮಹರ್ಷಿಯ ಬಾಯಲ್ಲಿ ದಕ್ಷಾರಾಮ ಭೀಮೇಶ್ವರ ಮಹಾತ್ಮ್ಯವನ್ನು ಹೊಗಳಿಸಿ ಸಂತೋಷಪಟ್ಟಿದ್ದಾನೆ. ಶಿವನೇ ಸಿಟ್ಟುಗೊಂಡಾಗ ವ್ಯಾಸನ ಮೇಲೆ ಪಾರ್ವತಿ ಕರುಣೆ ದೋರಲು ಕಾರಣವನ್ನು, ಶ್ರೀನಾಥನು ಚಮತ್ಕಾರವಾಗಿ ಹೊಂದಿಸಿದ್ದಾನೆ. ಕಾಶಿ ಗೌರಿಗೆ ಸವತಿ. ತನ್ನ ಸವತಿಯ ಮೇಲೆ ಸಿಟ್ಟುಗೊಂಡುದರಿಂದ ವ್ಯಾಸನು ಪಾರ್ವತಿಗೆ ಪ್ರೀತಿಪಾತ್ರನಾದನು. ತನ್ನ ಪ್ರೇಯಸಿಯನ್ನು ಶಪಿಸ ಹೊರಟುದರಿಂದ ಶಿವನಿಗೆ ಅವನ ಮೇಲೆ ಮೇರೆಯರಿಯದ ಆಗ್ರಹವುಂಟಾಯಿತು!

## ಉಪಸಂಹಾರ

ಶ್ರೀನಾಥನು ಹಲವು ಕೃತಿಗಳನ್ನು ರಚಿಸಿದುದೇ ಅಲ್ಲದೆ ತೆಲುಗಿನಲ್ಲಿ ಪ್ರಬಂಧ ಸಂಪ್ರದಾಯವನ್ನು ಸ್ಥಾಪಿಸಿದವನು. ಅವನಿಗಿಂತ ಮೊದಲು ಪುರಾಣಗಳ ಅನುವಾದ ಮಾತ್ರ ನಡೆದಿತ್ತು. ಚಂಪೂ ಕಾವ್ಯ ವೈಖರಿಯನ್ನು ತೆಲುಗರಿಗೆ ಪ್ರಿಯವಾಗಿಸಿದವನು ಶ್ರೀನಾಥ. ಈತನ ಮಾರ್ಗದಲ್ಲಿಯೇ ಮುಂದೆ ಅಲ್ಲಸಾನಿ ಪೆದ್ದನಾದಿ ಕವಿಗಳು ನಡೆದರು. ಹಲವು ಸಂದರ್ಭಗಳಲ್ಲಿ ಅವರು ಶ್ರೀನಾಥನನ್ನು ಅನುಕರಣಮಾಡಿರುವುದು ಸ್ಪಷ್ಟವಾಗಿದೆ.

ಶ್ರೀನಾಥನು ಕನ್ನಡ ಚಂಪೂಕಾವ್ಯ ಸಂಪ್ರದಾಯವನ್ನು ಕಂಡು ಮೆಂಚ್ಚಿ ಅದನ್ನು ತೆಲುಗಿನಲ್ಲಿ ಬಳಕೆಗೆ ತಂದನೆಂದು ಭಾವಿಸಲು ಕಾರಣವಿದೆ. ಅವನು ಕನ್ನಡಿಗನೇ ಇರಬಹುದುದೆಂದೂ ಕೆಲವರು ವಿದ್ವಾಂಸರು ಊಹಿಸಿದ್ದಾರೆ. ಭೀಮಖಂಡದಲ್ಲಿ ಶ್ರೀನಾಥನು

ತನ್ನ ಭಾಷೆಯನ್ನು ಕುರಿತು ಈ ಮಾತನ್ನು ಹೇಳಿಕೊಂಡಿದ್ದಾನೆ.

ಪ್ರೌಢಿ ಪರಿಕಿಂಪ ಸಂಸ್ಕೃತ ಭಾಷ ಯಂಡ್ರು
ಪಲುಕು ನುಡಿಕಾರಮುನ ನಾಂಧ್ರ ಭಾಷಯಂದು
ರೆವ್ವರೇ ಮನ್ನನಂಡ್ರು ನಾಕೇಮಿ ಕೊಜಿತ
ನಾ ಕವಿತ್ವಂಬು ನಿಜಮು ಕರ್ಣಾಟಭಾಷ.

(ಪ್ರೌಢಿಮೆಯನ್ನು ಪರೀಕ್ಷಿಸಿದವರು ನನ್ನ ಭಾಷೆಯನ್ನು ಸಂಸ್ಕೃತ ಭಾಷೆಯೆನ್ನುತ್ತಾರೆ. ಪಲುಕು ನುಡಿಕಾರದಲ್ಲಿ ಆಂಧ್ರಭಾಷೆಯೆನ್ನುವರು. ಯಾರು ಏನು ಹೇಳಿದರೆ ತಾನೆ ನನಗೇನು ಕೊರತೆ? ನನ್ನ ಕವಿತ್ವವು ನಿಜವಾಗಿ ಕರ್ಣಾಟಭಾಷೆ) ಇದರಿಂದ ಶ್ರೀನಾಥನ ಮಾತೃಭಾಷೆ ಕನ್ನಡವಿದ್ದು ಆಂಧ್ರ ದೇಶದಲ್ಲಿ ನೆಲಸಿದ್ದರಿಂದ ತೆಲುಗು ಕಲಿತು ಆ ಭಾಷೆಯಲ್ಲಿಯೇ ಪ್ರೌಢಿಮೆಯನ್ನು ಗಳಿಸಿ ಕಾವ್ಯ ಬರೆದನೆಂದೂ ಶ್ರೀ ಅಕ್ಕಿರಾಜು ಉಮಾಕಾಂತಂರವರು ಊಹಿಸಿದ್ದಾರೆ. ಆದರೆ ಇಲ್ಲಿ 'ಕರ್ಣಾಟಕ ಭಾಷ' ಎಂಬ ಮಾತಿಗೆ ಕನ್ನಡವೆಂದು ಅರ್ಥಮಾಡುವುದು, ಸಾಧ್ಯವಲ್ಲ. ಶ್ರೀನಾಥನ ಕಾವ್ಯಗಳೆಲ್ಲ ತೆಲುಗಿನಲ್ಲಿಯೇ ಇವೆ. ಆದ್ದರಿಂದ ಈ ಮಾತಿಗೆ ಕರ್ಣಾಟಕ ರಾಜ್ಯದಲ್ಲಿ ಬಳಕೆಯಲ್ಲಿದ್ದ ತೆಲುಗು ಭಾಷೆಯೆಂದು ಕೆಲವರು ಒಂದು ವಾದ ಬೆಳಸಿದ್ದಾರೆ. ಆದರೆ ಶ್ರೀನಾಥನು ತನ್ನ 'ಭಾಷೆ' ಕರ್ಣಾಟಕವೆಂದು ಹೇಳಿಲ್ಲ. "ನಾ ಕವಿತ್ವಂಬು ನಿಜಮು ಕರ್ಣಾಟಭಾಷ" ಎಂದು ತನ್ನ ಕವಿತೆಯನ್ನು ಕುರಿತು ಹೇಳಿಕೊಂಡಿದ್ದಾನೆ. ವಿಜಯನಗರದ ಕನ್ನಡರಾಯನ ವಿಶೇಷ ಮನ್ನಣೆಗೆ ಪಾತ್ರನಾಗಿ 'ಕರ್ಣಾಟ ಕಟಕ ಪದ್ಮವನ ಹೇಳಿ' ಯೆನಿಸಿಕೊಂಡು ಹಲವರು ಕನ್ನಡ ಕವಿಗಳ ಪರಿಚಯ ಸ್ನೇಹಗಳನ್ನು ಪಡೆದ ಶ್ರೀನಾಥನು ಹಲವು ಕನ್ನಡ ಕಾವ್ಯಗಳನ್ನು

ಓದಿಸಿ ಕೇಳಿರಬೇಕೆಂದು ಭಾವಿಸಿದರೆ ತಪ್ಪಲ್ಲ. ಸಂಸ್ಕೃತ ಕನ್ನಡಗಳ ಸೂಕ್ತ ಸಮ್ಮಿಶ್ರಣವಾದ ಒಂದು ಕಾವ್ಯಭಾಷೆ ಈ ವೇಳೆಗಾಗಲೇ ಕುದುರಿತ್ತು. ಆ ಮಾರ್ಗವನ್ನೇ ಅನುಸರಿಸಿ ತಾನೂ ಕವಿತೆ ಕಟ್ಟಿದೆನೆಂದು ಇಲ್ಲಿ ಶ್ರೀನಾಥನು ಹೇಳಿಕೊಂಡಿರುವನೆಂದು ತೋರುತ್ತದೆ. 'ಸೌಂದರವಿಳಾಸ'ವೆಂಬ ಕನ್ನಡ ಕಾವ್ಯವನ್ನು ಬರೆದ ಅಣ್ಣಾಜಿಯೆಂಬ ಕವಿಯು ಪೂರ್ವ ಕವಿಸ್ಮರಣೆ ಮಾಡುವಾಗ "ಕ್ಷೋಣಿಯೊಳು ಕವಿರಾಜ ಮಕುಟಮಣಿ ಶ್ರೀನಾಥ"ನ ಸ್ಮರಣೆ ಮಾಡಿದ್ದಾನೆ. ಈ ಶ್ರೀನಾಥನು ಬಹುಶಃ ತೆಲುಗಿನ 'ಕವಿರಾಜ'ನೇ ಇರಬಹುದೆ?

ಇದೆಲ್ಲ ಹೇಗೇ ಇದ್ದರೂ ತೆಲುಗಿನಲ್ಲಿ ಶ್ರೀನಾಥನು ಬಹಳ ಮಾನ್ಯಸ್ಥಾನವನ್ನು ಗಳಿಸಿದ ಹಿರಿಯ ಕವಿ. ಆತನ ಕಾವ್ಯಗಳನ್ನು ಮೆಚ್ಚದ ತೆಲುಗರಿಲ್ಲ, ಆತನ ಚಾಟು ಪದ್ಯಗಳು ಎಲ್ಲೆಡೆಗಳಲ್ಲಿಯೂ ಪ್ರಚಾರ ಹೊಂದಿವೆ. ಅವನ ರಸಿಕತೆ ಮನೆ ಮಾತು. ಅವನು ಮಹಾ ಶಿವಭಕ್ತ.

ಕೆ.ಸ. ೨೧೮೬೮ ಎಂಯುಪಿಎಂ—೧೦,೦೦೦ ಪ್ರತಿಗಳು—೬–೭–೮೨

## ಕೆಲವು ಸಾಹಿತ್ಯ ಕೃತಿಗಳು

### ಬೆಲೆ : ೨೫ ಪೈಸೆಗಳು

೧. ಕುಮಾರವ್ಯಾಸ—ಎಸ್. ವಿ. ರಂಗಣ್ಣ
೨. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೩. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೪. ಪಂಪ—ತೀ. ನಂ. ಶ್ರೀಕಂಠಯ್ಯ
೫. ಕರ್ಣಾಟಕ ಕಾದಂಬರಿ—ವಿ. ಸೀತಾರಾಮಯ್ಯ
೬. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೭. ಭಾಸ—ಡಾ॥ ಎಚ್. ಎಲ್. ಹರಿಯಪ್ಪ
೮. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ
೯. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೧೦. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೧೧. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೧೨. ನಯಸೇನ—ಜಿ. ವೆಂಕಟಸುಬ್ಬಯ್ಯ
೧೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೧೪. ಲಕ್ಷ್ಮೀಶ—ಎನ್. ಅನಂತರಂಗಾಚಾರ್
೧೫. ಮುದ್ದಣ— ತ. ಸು. ಶಾಮರಾವ್
೧೬. ಜನಪದ ಮುಕ್ತಕಗಳು—ಎಚ್. ಎಂ. ಶಂಕರನಾರಾಯಣರಾವ್
೧೭. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ
೧೮. ಮಹಾಭಾರತ—ಡಾ॥ ಕೆ. ಕೃಷ್ಣಮೂರ್ತಿ
೧೯. ನೇಮಿಚಂದ್ರ—ಎನ್. ಅನಂತರಂಗಾಚಾರ್
೨೦. ಶ್ರೀನಾಥ—ಕೆ. ವೆಂಕಟರಾಮಪ್ಪ
೨೧. ಷಡಕ್ಷರದೇವ—ದೇ. ಜವರೇಗೌಡ
೨೨. ಚಿತ್ರಾಂಗದಾ—ಉ. ಕಾ. ಸುಬ್ಬರಾಯಾಚಾರ್
೨೩. ಸಂಚಿಯ ಹೊನ್ನಮ್ಮ—ಎಚ್. ಎಂ. ಶಂಕರನಾರಾಯಣ ರಾವ್
೨೪. ವಾಲ್ಮೀಕಿ ರಾಮಾಯಣ—ಉ. ಕಾ. ಸುಬ್ಬರಾಯಾಚಾರ್
೨೫. ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೨೬. ತುಳಸೀದಾಸ—ಡಾ॥ ಹಿರಣ್ಮಯ

೨೭. ವೇಮನ—ಕೆ. ವೆಂಕಟರಾಮಪ್ಪ
೨೮. ಕನ್ನಡದಲ್ಲಿ ಅನುಭಾವ ಸಾಹಿತ್ಯ—ಡಾ॥ ಎಚ್. ತಿಪ್ಪೇರುದ್ರಸ್ವಾಮಿ
೨೯. ಅಲ್ಲಮಪ್ರಭು—ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ
೩೦. ಕಾಳಿದಾಸನ ನಾಟಕಗಳು—ಡಾ॥ ಕೆ. ಕೃಷ್ಣಮೂರ್ತಿ
೩೧. ಅಣ್ಣನ ಆದರ್ಶ—ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ
೩೨. ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ—ದೇವಂಗಿ
ಟಿ. ಚಂದ್ರಶೇಖರ
೩೩. ಸೂರದಾಸ—ಎಂ. ಎಸ್. ಕೃಷ್ಣಮೂರ್ತಿ
೩೪. ಜನ್ನ—ಡಾ॥ ಸಿ. ಪಿ. ಕೃಷ್ಣಕುಮಾರ್
೩೫. ರತ್ನಾಕರ ಮಹಾಕವಿ—ಜಿ. ಬ್ರಹ್ಮಪ್ಪ
೩೬. ಮಾಘಕವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೩೭. ನಿಜಗುಣಶಿವಯೋಗಿ—ಎಚ್. ಗಂಗಾಧರನ್
೩೮. ಮುದ್ರಾರಾಕ್ಷಸ—ಡಾ॥ ಎನ್. ಎಸ್. ಅನಂತರಂಗಾಚಾರ್
೩೯. ರಾಘವಾಂಕ—ರಾಮೇಗೌಡ
೪೦. ಮೂರನೆಯ ಮಂಗರಸ ಕವಿ—ಹಂಪ ನಾಗರಾಜಯ್ಯ
೪೧. ನಾಗಚಂದ್ರ—ಡಾ॥ ಸಿ. ಪಿ. ಕೃಷ್ಣಕುಮಾರ್
೪೨. ವಡ್ಡಾರಾಧನೆ—ಹಂಪ ನಾಗರಾಜಯ್ಯ
೪೩. ಮಹಾಕವಿ ಭಾರವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೪. ಕವಿ ಮುರಾರಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೫. ಚನ್ನಬಸವಣ್ಣ—ಓ. ಎನ್. ಲಿಂಗಣ್ಣಯ್ಯ
೪೬. ಕವಿ ಶ್ರೀಹರ್ಷ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೭. ಕಬೀರದಾಸ—ಡಾ॥ ಹಿರಣ್ಮಯ
೪೮. ವಿದ್ಯಾಪತಿ—ಎಂ. ಎಸ್. ಕೃಷ್ಣಮೂರ್ತಿ
೪೯. ಕವಿ ಭಟ್ಟನಾರಾಯಣ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೫೦. ಕಾವ್ಯದಲ್ಲಿ ಧ್ವನಿ—ಗುರುಪಾದ ಕೆ. ಹೆಗ್ಡೆ
೫೧. ಪೊನ್ನ—ಎನ್. ಅನಂತರಂಗಾಚಾರ್
೫೨. ಎಡೆಯೂರು ತೋಂಟದ ಸಿದ್ಧಲಿಂಗಯತಿ—ಓ. ಎನ್. ಲಿಂಗಣ್ಣಯ್ಯ
೫೩. ದೇವರ ದಾಸಿಮಯ್ಯ—ಕೆ. ಅನಂತರಾಮು
೫೪. ಸಂಸ್ಕೃತ ಸಾಹಿತ್ಯ—ಡಾ॥ ಆರ್. ಎಸ್. ಶಿವಗಣೇಶಮೂರ್ತಿ
೫೫. ಚಾಮುಂಡರಾಯ—ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರಿ
೫೬. ಶ್ರೀ ಸಮರ್ಥ ರಾಮದಾಸರು—ಬಿ. ಪಿ. ಚಂದ್ರಾಬಾಯಿ
೫೭. ಉಪಭಾಷಾ ಅಧ್ಯಯನ—ಶಾಲಿನಿ ರಘುನಾಥ